KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – III | ಬೆಂಗಳೂರು, ಸೋಮವಾರ, ಮಾರ್ಚ್ ೮, ೨೦೧೦ (ಫಾಲ್ಗುಣ ೧೭, ಶಕ ವರ್ಷ ೧೯೩೧) | ನಂ. ೨೨೫ |
|---|---|---|

**ಆಯುಕ್ತರವರ ಕಾರ್ಯಾಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಇ.ಎಲ್.ಎನ್/ಪಿಆರ್/89/09–10, ದಿನಾಂಕ: 8ನೇ ಮಾರ್ಚ್, 2010**

**ನಮೂನೆ – 1**

(ನಿಯಮ 10(1) ನ್ನು ನೋಡಿ)

(ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಚುನಾವಣೆ ಉಪಯೋಗಕ್ಕಾಗಿ)

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಚುನಾವಣೆ ನಡೆಸುವ ಹಿನ್ನೆಲೆಯಲ್ಲಿ

**(1)** ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ 1976 ರ ಪ್ರಕಾರ ಸ್ಥಾಪಿತವಾದ **ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ** ವಾರ್ಡುಗಳಿಗೆ ಸದಸ್ಯರನ್ನು ಆಯ್ಕೆಮಾಡುವ ಸಲುವಾಗಿ, ಪಾಲಿಕೆಯ ವಿವಿಧ ವಾರ್ಡುಗಳಿಗೆ ಸಂಬಂಧಿಸಿದಂತೆ ಚುನಾವಣೆ ನಡೆಸಲು ಅನುಬಂಧದಲ್ಲಿ ಸೂಚಿಸಿರುವಂತೆ ಈ ಅಧಿಸೂಚನೆ ಹೊರಡಿಸಿದೆ.

**(2)** ಮರಣ/ರಾಜೀನಾಮೆ ಸಲ್ಲಿಸಿರುವ ಸದಸ್ಯರ ಖಾಲಿ ಸ್ಥಾನಕ್ಕೆ ಭರ್ತಿ ಮಾಡಲು ____________ ನಿಗದಿ ಮಾಡಿರುವ _____ ವಾರ್ಡಿನ ಬಗ್ಗೆ ಘೋಷಣೆ ಮಾಡಿರುವ ಖಾಲಿ ಸ್ಥಾನಕ್ಕೆ.

ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ) ನಿಯಮಾವಳಿಗಳು 1979 ರ ನಿಯಮಾವಳಿ–10 ರಂತೆ ಪ್ರದತ್ತವಾದ ಅಧಿಕಾರ ಚಲಾಯಿಸಿ **ಭರತ್ ಲಾಲ್ ಮೀನಾ ಭಾ.ಆ.ಸೇ, ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಬೆಂಗಳೂರು**, ಆದ ನಾನು **ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡುಗಳಿಗೆ ಚುನಾವಣೆ** ನಡೆಸಲು ಈ ಕೆಳಕಂಡಂತೆ ಚುನಾವಣಾ ವೇಳಾಪಟ್ಟಿಯನ್ನು ನಿಗಧಿಪಡಿಸಿರುತ್ತೇನೆ.

| | |
|---|---|
| ಎ) ನಾಮನಿರ್ದೇಶನ ಸಲ್ಲಿಸಲು ಅಂತಿಮ ದಿನಾಂಕ: | 15.03.2010 (ಸೋಮವಾರ) |
| ಬಿ) ನಾಮನಿರ್ದೇಶನ ಪತ್ರಗಳ ಪರಿಶೀಲನೆ ದಿನಾಂಕ: | 17.03.2010 (ಬುಧವಾರ) |
| ಸಿ) ನಾಮನಿರ್ದೇಶನ ಪತ್ರಗಳನ್ನು ಅಭ್ಯರ್ಥಿಗಳು ಹಿಂದಕ್ಕೆ ಪಡೆಯುವ ಅಂತಿಮ ದಿನಾಂಕ: | 19.03.2010 (ಶುಕ್ರವಾರ) |
| ಡಿ) ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ: | 28.03.2010 (ಭಾನುವಾರ) |
| ಇ) ಚುನಾವಣೆ ಪ್ರಕ್ರಿಯೆ ಮುಕ್ತಾಯಗೊಳ್ಳುವ ದಿನಾಂಕ: : | 06.04.2010 (ಮಂಗಳವಾರ) |

**ಆಯುಕ್ತರು**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು

## ಅನುಬಂಧ ನಮೂನೆ – 1

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| 1 | 2 | 3 | 4 |
| 1 | 1 | ಕೆಂಪೇಗೌಡ ವಾರ್ಡ್ | ಹಿಂದುಳಿದ ವರ್ಗ – ಬಿ |
| 2 | 2 | ಚೌಡೇಶ್ವರಿ ವಾರ್ಡ್ | ಹಿಂದುಳಿದ ವರ್ಗ – ಎ (ಮಹಿಳೆ) |
| 3 | 3 | ಅಟ್ಟೂರು | ಸಾಮಾನ್ಯ (ಮಹಿಳೆ) |
| 4 | 4 | ಯಲಹಂಕ ಉಪನಗರ | ಹಿಂದುಳಿದ ವರ್ಗ – ಎ |
| 5 | 5 | ಜಕ್ಕೂರು | ಸಾಮಾನ್ಯ |
| 6 | 6 | ಥಣಿಸಂದ್ರ | ಹಿಂದುಳಿದ ವರ್ಗ – ಎ (ಮಹಿಳೆ) |
| 7 | 7 | ಬ್ಯಾಟರಾಯನಪುರ | ಪರಿಶಿಷ್ಟ ಪಂಗಡ (ಮಹಿಳೆ) |
| 8 | 8 | ಕೊಡಿಗೇಹಳ್ಳಿ | ಹಿಂದುಳಿದ ವರ್ಗ – ಬಿ |
| 9 | 9 | ವಿದ್ಯಾರಣ್ಯಪುರ | ಸಾಮಾನ್ಯ (ಮಹಿಳೆ) |
| 10 | 10 | ದೊಡ್ಡಬೊಮ್ಮಸಂದ್ರ | ಸಾಮಾನ್ಯ |
| 11 | 11 | ಕುವೆಂಪು ನಗರ | ಹಿಂದುಳಿದ ವರ್ಗ– ಎ (ಮಹಿಳೆ) |
| 12 | 12 | ಶೆಟ್ಟಿಹಳ್ಳಿ | ಪರಿಶಿಷ್ಟ ಜಾತಿ (ಮಹಿಳೆ) |
| 13 | 13 | ಮಲ್ಲಸಂದ್ರ | ಹಿಂದುಳಿದ ವರ್ಗ – ಎ (ಮಹಿಳೆ) |
| 14 | 14 | ಬಾಗಲಕುಂಟೆ | ಸಾಮಾನ್ಯ |
| 15 | 15 | ಟಿ.ದಾಸರಹಳ್ಳಿ | ಸಾಮಾನ್ಯ (ಮಹಿಳೆ) |
| 16 | 16 | ಜಾಲಹಳ್ಳಿ | ಪರಿಶಿಷ್ಟ ಜಾತಿ |
| 17 | 17 | ಜೆ.ಪಿ.ಉದ್ಯಾನವನ | ಸಾಮಾನ್ಯ |
| 18 | 18 | ರಾಧಾ ಕೃಷ್ಣಾ ದೇವಸ್ಥಾನ ವಾರ್ಡ್ | ಹಿಂದುಳಿದ ವರ್ಗ – ಎ |
| 19 | 19 | ಸಂಜಯ ನಗರ | ಹಿಂದುಳಿದ ವರ್ಗ– ಬಿ |
| 20 | 20 | ಗಂಗಾನಗರ | ಸಾಮಾನ್ಯ |
| 21 | 21 | ಹೆಬ್ಬಾಳ | ಸಾಮಾನ್ಯ |
| 22 | 22 | ವಿಶ್ವನಾಥ ನಾಗೇನಹಳ್ಳಿ | ಹಿಂದುಳಿದ ವರ್ಗ – ಬಿ (ಮಹಿಳೆ) |
| 23 | 23 | ನಾಗಾವರ | ಸಾಮಾನ್ಯ (ಮಹಿಳೆ) |
| 24 | 24 | ಹೆಚ್.ಬಿ.ಆರ್. ಬಡಾವಣೆ | ಹಿಂದುಳಿದ ವರ್ಗ– ಎ |
| 25 | 25 | ಹೊರಮಾವು | ಸಾಮಾನ್ಯ (ಮಹಿಳೆ) |
| 26 | 26 | ರಾಮಮೂರ್ತಿನಗರ | ಹಿಂದುಳಿದ ವರ್ಗ – ಎ |
| 27 | 27 | ಬಾಣಸವಾಡಿ | ಸಾಮಾನ್ಯ |
| 28 | 28 | ಕಮ್ಮನಹಳ್ಳಿ | ಸಾಮಾನ್ಯ |
| 29 | 29 | ಕಾಚರಕನಹಳ್ಳಿ | ಸಾಮಾನ್ಯ |
| 30 | 30 | ಕಾಡುಗೊಂಡನಹಳ್ಳಿ | ಸಾಮಾನ್ಯ (ಮಹಿಳೆ) |
| 31 | 31 | ಕುಶಾಲ್ ನಗರ | ಸಾಮಾನ್ಯ (ಮಹಿಳೆ) |
| 32 | 32 | ಕಾವಲ್‌ಭೈರಸಂದ್ರ | ಸಾಮಾನ್ಯ (ಮಹಿಳೆ) |
| 33 | 33 | ಮನೋರಾಯನ ಪಾಳ್ಯ | ಹಿಂದುಳಿದ ವರ್ಗ – ಎ (ಮಹಿಳೆ) |
| 34 | 34 | ಗಂಗೇನಹಳ್ಳಿ | ಸಾಮಾನ್ಯ |
| 35 | 35 | ಅರಮನೆ ನಗರ | ಸಾಮಾನ್ಯ |
| 36 | 36 | ಮತ್ತಿಕೆರೆ | ಸಾಮಾನ್ಯ |
| 37 | 37 | ಯಶವಂತಪುರ | ಸಾಮಾನ್ಯ |
| 38 | 38 | ಹೆಚ್.ಎಂ.ಟಿ | ಸಾಮಾನ್ಯ (ಮಹಿಳೆ) |
| 39 | 39 | ಚೊಕ್ಕಸಂದ್ರ | ಹಿಂದುಳಿದ ವರ್ಗ – ಎ |
| 40 | 40 | ದೊಡ್ಡಬಿದರಕಲ್ಲು | ಸಾಮಾನ್ಯ (ಮಹಿಳೆ) |
| 41 | 41 | ಪೀಣ್ಯ ಕೈಗಾರಿಕಾ ಪ್ರದೇಶ | ಸಾಮಾನ್ಯ |
| 42 | 42 | ಲಕ್ಷ್ಮಿದೇವಿ ನಗರ | ಹಿಂದುಳಿದ ವರ್ಗ – ಎ |

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| 1 | 2 | 3 | 4 |
| 43 | 43 | ನಂದಿನಿ ಬಡಾವಣೆ | ಹಿಂದುಳಿದ ವರ್ಗ – ಎ |
| 44 | 44 | ಮಾರಪ್ಪನ ಪಾಳ್ಯ | ಸಾಮಾನ್ಯ (ಮಹಿಳೆ) |
| 45 | 45 | ಮಲ್ಲೇಶ್ವರಂ | ಹಿಂದುಳಿದ ವರ್ಗ – ಎ |
| 46 | 46 | ಜಯಚಾಮ ರಾಜೇಂದ್ರ ನಗರ | ಸಾಮಾನ್ಯ |
| 47 | 47 | ದೇವರ ಜೀವನಹಳ್ಳಿ | ಪರಿಶಿಷ್ಟ ಜಾತಿ |
| 48 | 48 | ಮುನೇಶ್ವರ ನಗರ | ಪರಿಶಿಷ್ಟ ಜಾತಿ (ಮಹಿಳೆ) |
| 49 | 49 | ಲಿಂಗರಾಜಪುರ | ಸಾಮಾನ್ಯ (ಮಹಿಳೆ) |
| 50 | 50 | ಬೆನ್ನಿಗಾನಹಳ್ಳಿ | ಪರಿಶಿಷ್ಟ ಜಾತಿ |
| 51 | 51 | ವಿಜ್ಞಾನಪುರ | ಪರಿಶಿಷ್ಟ ಜಾತಿ |
| 52 | 52 | ಕೆ.ಆರ್.ಪುರಂ | ಸಾಮಾನ್ಯ |
| 53 | 53 | ಬಸವನಪುರ | ಸಾಮಾನ್ಯ |
| 54 | 54 | ಹೂಡಿ | ಹಿಂದುಳಿದ ವರ್ಗ– ಎ |
| 55 | 55 | ದೇವಸಂದ್ರ | ಹಿಂದುಳಿದ ವರ್ಗ – ಬಿ (ಮಹಿಳೆ) |
| 56 | 56 | ಎ.ನಾರಾಯಣಪುರ | ಹಿಂದುಳಿದ ವರ್ಗ – ಎ |
| 57 | 57 | ಸಿ.ವಿ.ರಾಮನ್ ನಗರ | ಹಿಂದುಳಿದ ವರ್ಗ – ಎ |
| 58 | 58 | ಹೊಸ ತಿಪ್ಪಸಂದ್ರ | ಸಾಮಾನ್ಯ (ಮಹಿಳೆ) |
| 59 | 59 | ಮಾರುತಿ ಸೇವಾನಗರ | ಪರಿಶಿಷ್ಟ ಜಾತಿ |
| 60 | 60 | ಸಗಾಯಪುರಂ | ಪರಿಶಿಷ್ಟ ಜಾತಿ |
| 61 | 61 | ಎಸ್.ಕೆ.ಗಾರ್ಡನ್ | ಪರಿಶಿಷ್ಟ ಜಾತಿ (ಮಹಿಳೆ) |
| 62 | 62 | ರಾಮಸ್ವಾಮಿ ಪಾಳ್ಯ | ಪರಿಶಿಷ್ಟ ಜಾತಿ |
| 63 | 63 | ಜಯಮಹಲ್ | ಸಾಮಾನ್ಯ |
| 64 | 64 | ರಾಜಮಹಲ್ ಗುಟ್ಟಹಳ್ಳಿ | ಸಾಮಾನ್ಯ (ಮಹಿಳೆ) |
| 65 | 65 | ಕಾಡು ಮಲ್ಲೇಶ್ವರಂ | ಹಿಂದುಳಿದ ವರ್ಗ – ಎ |
| 66 | 66 | ಸುಬ್ರಮಣ್ಯ ನಗರ | ಸಾಮಾನ್ಯ (ಮಹಿಳೆ) |
| 67 | 67 | ನಾಗಪುರ | ಹಿಂದುಳಿದ ವರ್ಗ – ಎ |
| 68 | 68 | ಮಹಾಲಕ್ಷ್ಮೀಪುರಂ | ಹಿಂದುಳಿದ ವರ್ಗ – ಬಿ |
| 69 | 69 | ಲಗ್ಗೆರೆ | ಸಾಮಾನ್ಯ |
| 70 | 70 | ರಾಜಗೋಪಾಲನಗರ | ಸಾಮಾನ್ಯ |
| 71 | 71 | ಹೆಗ್ಗನಹಳ್ಳಿ | ಸಾಮಾನ್ಯ |
| 72 | 72 | ಹೆರೋಹಳ್ಳಿ | ಹಿಂದುಳಿದ ವರ್ಗ – ಬಿ |
| 73 | 73 | ಕೊಟ್ಟಿಗೇಪಾಳ್ಯ | ಸಾಮಾನ್ಯ |
| 74 | 74 | ಶಕ್ತಿಗಣಪತಿ ನಗರ | ಸಾಮಾನ್ಯ (ಮಹಿಳೆ) |
| 75 | 75 | ಶಂಕರಮಠ | ಸಾಮಾನ್ಯ |
| 76 | 76 | ಗಾಯತ್ರಿ ನಗರ | ಸಾಮಾನ್ಯ (ಮಹಿಳೆ) |
| 77 | 77 | ದತ್ತಾತ್ರೇಯ ದೇವಸ್ಥಾನ | ಸಾಮಾನ್ಯ |
| 78 | 78 | ಪುಲಿಕೇಶಿನಗರ | ಸಾಮಾನ್ಯ |
| 79 | 79 | ಸರ್ವಜ್ಞ ನಗರ | ಪರಿಶಿಷ್ಟ ಜಾತಿ (ಮಹಿಳೆ) |
| 80 | 80 | ಹೊಯ್ಸಳ ನಗರ | ಪರಿಶಿಷ್ಟ ಜಾತಿ (ಮಹಿಳೆ) |
| 81 | 81 | ವಿಜ್ಞಾನ ನಗರ | ಸಾಮಾನ್ಯ (ಮಹಿಳೆ) |
| 82 | 82 | ಗರುಡಾಚಾರ್ ಪಾಳ್ಯ | ಸಾಮಾನ್ಯ |
| 83 | 83 | ಕಾಡುಗೋಡಿ | ಸಾಮಾನ್ಯ |
| 84 | 84 | ಹಗದೂರು | ಹಿಂದುಳಿದ ವರ್ಗ – ಬಿ |
| 85 | 85 | ದೊಡ್ಡ ನೆಕ್ಕುಂಡಿ | ಸಾಮಾನ್ಯ |
| 86 | 86 | ಮಾರತಹಳ್ಳಿ | ಹಿಂದುಳಿದ ವರ್ಗ – ಎ (ಮಹಿಳೆ) |

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| 1 | 2 | 3 | 4 |
| 87 | 87 | ಹೆಚ್.ಎ.ಎಲ್. ವಿಮಾನ ನಿಲ್ದಾಣ | ಸಾಮಾನ್ಯ |
| 88 | 88 | ಜೀವನ್ ಭೀಮಾನಗರ | ಪರಿಶಿಷ್ಟ ಜಾತಿ |
| 89 | 89 | ಜೋಗುಪಾಳ್ಯ | ಸಾಮಾನ್ಯ |
| 90 | 90 | ಅಲಸೂರು | ಪರಿಶಿಷ್ಟ ಜಾತಿ |
| 91 | 91 | ಭಾರತಿ ನಗರ | ಸಾಮಾನ್ಯ |
| 92 | 92 | ಶಿವಾಜಿ ನಗರ | ಸಾಮಾನ್ಯ (ಮಹಿಳೆ) |
| 93 | 93 | ವಸಂತನಗರ | ಸಾಮಾನ್ಯ |
| 94 | 94 | ಗಾಂಧಿನಗರ | ಸಾಮಾನ್ಯ |
| 95 | 95 | ಸುಭಾಷ್ ನಗರ | ಪರಿಶಿಷ್ಟ ಜಾತಿ |
| 96 | 96 | ಓಕಳಿಪುರಂ | ಪರಿಶಿಷ್ಟ ಜಾತಿ (ಮಹಿಳೆ) |
| 97 | 97 | ದಯಾನಂದ ನಗರ | ಪರಿಶಿಷ್ಟ ಜಾತಿ (ಮಹಿಳೆ) |
| 98 | 98 | ಪ್ರಕಾಶ್ ನಗರ | ಸಾಮಾನ್ಯ |
| 99 | 99 | ರಾಜಾಜಿ ನಗರ | ಹಿಂದುಳಿದ ವರ್ಗ – ಎ |
| 100 | 100 | ಬಸವೇಶ್ವರ ನಗರ | ಹಿಂದುಳಿದ ವರ್ಗ – ಎ |
| 101 | 101 | ಕಾಮಾಕ್ಷಿ ಪಾಳ್ಯ | ಸಾಮಾನ್ಯ |
| 102 | 102 | ವೃಷಭಾವತಿ ನಗರ | ಹಿಂದುಳಿದ ವರ್ಗ – ಎ (ಮಹಿಳೆ) |
| 103 | 103 | ಕಾವೇರಿಪುರ | ಸಾಮಾನ್ಯ |
| 104 | 104 | ಗೋವಿಂದರಾಜ್ ನಗರ | ಹಿಂದುಳಿದ ವರ್ಗ – ಎ |
| 105 | 105 | ಅಗ್ರಹಾರ ದಾಸರಹಳ್ಳಿ | ಹಿಂದುಳಿದ ವರ್ಗ – ಎ (ಮಹಿಳೆ) |
| 106 | 106 | ಡಾ. ರಾಜಕುಮಾರ ವಾರ್ಡ್ | ಸಾಮಾನ್ಯ |
| 107 | 107 | ಶಿವನಗರ | ಸಾಮಾನ್ಯ |
| 108 | 108 | ಶ್ರೀರಾಮ ಮಂದಿರ ವಾರ್ಡ್ | ಹಿಂದುಳಿದ ವರ್ಗ – ಎ (ಮಹಿಳೆ) |
| 109 | 109 | ಚಿಕ್ಕಪೇಟೆ | ಸಾಮಾನ್ಯ |
| 110 | 110 | ಸಂಪಂಗಿರಾಮ್ ನಗರ | ಹಿಂದುಳಿದ ವರ್ಗ – ಎ |
| 111 | 111 | ಶಾಂತಲಾ ನಗರ | ಹಿಂದುಳಿದ ವರ್ಗ – ಎ |
| 112 | 112 | ದೊಮ್ಮಲೂರು | ಸಾಮಾನ್ಯ (ಮಹಿಳೆ) |
| 113 | 113 | ಕೋನೇನ ಅಗ್ರಹಾರ | ಸಾಮಾನ್ಯ |
| 114 | 114 | ಅಗರಮ್ | ಪರಿಶಿಷ್ಟ ಜಾತಿ (ಮಹಿಳೆ) |
| 115 | 115 | ವನ್ನಾರ್‌ಪೇಟೆ | ಪರಿಶಿಷ್ಟ ಜಾತಿ |
| 116 | 116 | ನೀಲಸಂದ್ರ | ಪರಿಶಿಷ್ಟ ಪಂಗಡ |
| 117 | 117 | ಶಾಂತಿನಗರ | ಸಾಮಾನ್ಯ (ಮಹಿಳೆ) |
| 118 | 118 | ಸುದಾಮ್ ನಗರ | ಪರಿಶಿಷ್ಟ ಜಾತಿ |
| 119 | 119 | ಧರ್ಮರಾಯ ಸ್ವಾಮಿ ದೇವಸ್ಥಾನ ವಾರ್ಡ್ | ಹಿಂದುಳಿದ ವರ್ಗ – ಎ |
| 120 | 120 | ಕಾಟನ್ ಪೇಟೆ | ಹಿಂದುಳಿದ ವರ್ಗ – ಎ (ಮಹಿಳೆ) |
| 121 | 121 | ಬಿನ್ನಿಪೇಟೆ | ಹಿಂದುಳಿದ ವರ್ಗ – ಎ (ಮಹಿಳೆ) |
| 122 | 122 | ಕೆಂಪಾಪುರ ಅಗ್ರಹಾರ | ಹಿಂದುಳಿದ ವರ್ಗ – ಎ (ಮಹಿಳೆ) |
| 123 | 123 | ವಿಜಯ ನಗರ | ಸಾಮಾನ್ಯ |
| 124 | 124 | ಹೊಸಹಳ್ಳಿ | ಹಿಂದುಳಿದ ವರ್ಗ – ಎ |
| 125 | 125 | ಮಾರೇನಹಳ್ಳಿ | ಹಿಂದುಳಿದ ವರ್ಗ – ಎ (ಮಹಿಳೆ) |
| 126 | 126 | ಮಾರುತಿ ಮಂದಿರ ವಾರ್ಡ್ | ಸಾಮಾನ್ಯ |
| 127 | 127 | ಮೂಡಲಪಾಳ್ಯ | ಹಿಂದುಳಿದ ವರ್ಗ – ಎ (ಮಹಿಳೆ) |
| 128 | 128 | ನಾಗರಬಾವಿ | ಸಾಮಾನ್ಯ |
| 129 | 129 | ಜ್ಞಾನ ಭಾರತಿ ವಾರ್ಡ್ | ಹಿಂದುಳಿದ ವರ್ಗ – ಬಿ |
| 130 | 130 | ಉಲ್ಲಾಳು | ಹಿಂದುಳಿದ ವರ್ಗ – ಎ |

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| 1 | 2 | 3 | 4 |
| 131 | 131 | ನಾಯಂಡಹಳ್ಳಿ | ಸಾಮಾನ್ಯ (ಮಹಿಳೆ) |
| 132 | 132 | ಅತ್ತಿಗುಪ್ಪೆ | ಸಾಮಾನ್ಯ |
| 133 | 133 | ಹಂಪಿ ನಗರ | ಸಾಮಾನ್ಯ |
| 134 | 134 | ಬಾಪೂಜಿ ನಗರ | ಹಿಂದುಳಿದ ವರ್ಗ – ಎ |
| 135 | 135 | ಪಾದರಾಯನಪುರ | ಸಾಮಾನ್ಯ (ಮಹಿಳೆ) |
| 136 | 136 | ಜಗಜೀವನ್ ರಾಮ್‌ನಗರ | ಸಾಮಾನ್ಯ (ಮಹಿಳೆ) |
| 137 | 137 | ರಾಯಪುರಂ | ಪರಿಶಿಷ್ಟ ಜಾತಿ |
| 138 | 138 | ಛಲವಾದಿ ಪಾಳ್ಯ | ಪರಿಶಿಷ್ಟ ಜಾತಿ |
| 139 | 139 | ಕೆ.ಆರ್. ಮಾರುಕಟ್ಟೆ | ಪರಿಶಿಷ್ಟ ಜಾತಿ |
| 140 | 140 | ಚಾಮರಾಜಪೇಟೆ | ಹಿಂದುಳಿದ ವರ್ಗ – ಎ |
| 141 | 141 | ಅಜಾದ್ ನಗರ | ಸಾಮಾನ್ಯ (ಮಹಿಳೆ) |
| 142 | 142 | ಸುಂಕೇನಹಳ್ಳಿ | ಸಾಮಾನ್ಯ |
| 143 | 143 | ವಿಶ್ವೇಶ್ವರಪುರಂ | ಸಾಮಾನ್ಯ |
| 144 | 144 | ಸಿದ್ದಾಪುರ | ಸಾಮಾನ್ಯ |
| 145 | 145 | ಹೊಂಬೇಗೌಡ ನಗರ | ಸಾಮಾನ್ಯ |
| 146 | 146 | ಲಕ್ಕಸಂದ್ರ | ಸಾಮಾನ್ಯ |
| 147 | 147 | ಆಡುಗೋಡಿ | ಸಾಮಾನ್ಯ |
| 148 | 148 | ಈಜೀಪುರ | ಸಾಮಾನ್ಯ (ಮಹಿಳೆ) |
| 149 | 149 | ವರ್ತೂರು | ಸಾಮಾನ್ಯ |
| 150 | 150 | ಬೆಲಂದೂರು | ಹಿಂದುಳಿದ ವರ್ಗ – ಬಿ |
| 151 | 151 | ಕೋರಮಂಗಲ | ಹಿಂದುಳಿದ ವರ್ಗ – ಎ (ಮಹಿಳೆ) |
| 152 | 152 | ಸುದ್ದುಗುಂಟೆಪಾಳ್ಯ | ಸಾಮಾನ್ಯ |
| 153 | 153 | ಜಯನಗರ | ಸಾಮಾನ್ಯ (ಮಹಿಳೆ) |
| 154 | 154 | ಬಸವನಗುಡಿ | ಸಾಮಾನ್ಯ |
| 155 | 155 | ಹನುಮಂತನಗರ | ಸಾಮಾನ್ಯ |
| 156 | 156 | ಶ್ರೀನಗರ | ಸಾಮಾನ್ಯ |
| 157 | 157 | ಗಾಳಿ ಆಂಜನೇಯ ದೇವಸ್ಥಾನ ವಾರ್ಡ | ಸಾಮಾನ್ಯ |
| 158 | 158 | ದೀಪಾಂಜಲಿನಗರ | ಹಿಂದುಳಿದ ವರ್ಗ – ಎ (ಮಹಿಳೆ) |
| 159 | 159 | ಕೆಂಗೇರಿ | ಸಾಮಾನ್ಯ |
| 160 | 160 | ರಾಜರಾಜೇಶ್ವರಿ ನಗರ | ಸಾಮಾನ್ಯ |
| 161 | 161 | ಹೊಸಕೆರೆಹಳ್ಳಿ | ಸಾಮಾನ್ಯ |
| 162 | 162 | ಗಿರಿನಗರ | ಸಾಮಾನ್ಯ (ಮಹಿಳೆ) |
| 163 | 163 | ಕತ್ರಿಗುಪ್ಪೆ | ಹಿಂದುಳಿದ ವರ್ಗ – ಎ |
| 164 | 164 | ವಿದ್ಯಾಪೀಠ ವಾರ್ಡ್ | ಹಿಂದುಳಿದ ವರ್ಗ – ಎ |
| 165 | 165 | ಗಣೇಶ ಮಂದಿರ ವಾರ್ಡ್ | ಹಿಂದುಳಿದ ವರ್ಗ – ಎ |
| 166 | 166 | ಕರಿಸಂದ್ರ | ಸಾಮಾನ್ಯ (ಮಹಿಳೆ) |
| 167 | 167 | ಯಡಿಯೂರು | ಹಿಂದುಳಿದ ವರ್ಗ – ಎ |
| 168 | 168 | ಪಟ್ಟಾಭಿರಾಮ ನಗರ | ಸಾಮಾನ್ಯ |
| 169 | 169 | ಬೈರಸಂದ್ರ | ಹಿಂದುಳಿದ ವರ್ಗ – ಎ |
| 170 | 170 | ಜಯನಗರ ಪೂರ್ವ | ಹಿಂದುಳಿದ ವರ್ಗ – ಎ |
| 171 | 171 | ಗುರಪ್ಪನಪಾಳ್ಯ | ಸಾಮಾನ್ಯ |
| 172 | 172 | ಮಡಿವಾಳ | ಸಾಮಾನ್ಯ |
| 173 | 173 | ಜಕ್ಕಸಂದ್ರ | ಸಾಮಾನ್ಯ (ಮಹಿಳೆ) |
| 174 | 174 | ಹೆಚ್.ಎಸ್.ಆರ್. ಬಡಾವಣೆ | ಸಾಮಾನ್ಯ (ಮಹಿಳೆ) |

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| 1 | 2 | 3 | 4 |
| 175 | 175 | ಬೊಮ್ಮನಹಳ್ಳಿ | ಸಾಮಾನ್ಯ |
| 176 | 176 | ಬಿ.ಟಿ.ಎಂ. ಬಡಾವಣೆ | ಸಾಮಾನ್ಯ |
| 177 | 177 | ಜೆ.ಪಿ.ನಗರ | ಹಿಂದುಳಿದ ವರ್ಗ – ಎ |
| 178 | 178 | ಸಾರಕ್ಕಿ | ಸಾಮಾನ್ಯ |
| 179 | 179 | ಶಾಕಾಂಬರಿನಗರ | ಹಿಂದುಳಿದ ವರ್ಗ – ಎ |
| 180 | 180 | ಬನಶಂಕರಿ ದೇವಸ್ಥಾನ ವಾರ್ಡ್ | ಸಾಮಾನ್ಯ |
| 181 | 181 | ಕುಮಾರಸ್ವಾಮಿ ಬಡಾವಣೆ | ಹಿಂದುಳಿದ ವರ್ಗ – ಎ |
| 182 | 182 | ಪದ್ಮನಾಭ ನಗರ | ಸಾಮಾನ್ಯ |
| 183 | 183 | ಚಿಕ್ಕ ಕಲ್ಲಸಂದ್ರ | ಸಾಮಾನ್ಯ |
| 184 | 184 | ಉತ್ತರಹಳ್ಳಿ | ಹಿಂದುಳಿದ ವರ್ಗ – ಎ |
| 185 | 185 | ಯಲಚೇನಹಳ್ಳಿ | ಹಿಂದುಳಿದ ವರ್ಗ – ಎ |
| 186 | 186 | ಜರಗನಹಳ್ಳಿ | ಸಾಮಾನ್ಯ (ಮಹಿಳೆ) |
| 187 | 187 | ಪುಟ್ಟೇನಹಳ್ಳಿ | ಹಿಂದುಳಿದ ವರ್ಗ – ಎ |
| 188 | 188 | ಬಿಲೇಕಹಳ್ಳಿ | ಸಾಮಾನ್ಯ (ಮಹಿಳೆ) |
| 189 | 189 | ಹೊಂಗಸಂದ್ರ | ಹಿಂದುಳಿದ ವರ್ಗ – ಬಿ (ಮಹಿಳೆ) |
| 190 | 190 | ಮಂಗಮ್ಮನ ಪಾಳ್ಯ | ಹಿಂದುಳಿದ ವರ್ಗ – ಎ (ಮಹಿಳೆ) |
| 191 | 191 | ಸಿಂಗಸಂದ್ರ | ಸಾಮಾನ್ಯ (ಮಹಿಳೆ) |
| 192 | 192 | ಬೇಗೂರು | ಹಿಂದುಳಿದ ವರ್ಗ – ಬಿ |
| 193 | 193 | ಅರಕೆರೆ | ಸಾಮಾನ್ಯ |
| 194 | 194 | ಗೊಟ್ಟಿಗೆರೆ | ಹಿಂದುಳಿದ ವರ್ಗ – ಬಿ (ಮಹಿಳೆ) |
| 195 | 195 | ಕೋಣನಕುಂಟೆ | ಸಾಮಾನ್ಯ (ಮಹಿಳೆ) |
| 196 | 196 | ಅಂಜನಾಪುರ | ಸಾಮಾನ್ಯ |
| 197 | 197 | ವಸಂತಪುರ | ಸಾಮಾನ್ಯ (ಮಹಿಳೆ) |
| 198 | 198 | ಹೆಮ್ಮಿಗೆಪುರ | ಹಿಂದುಳಿದ ವರ್ಗ – ಎ (ಮಹಿಳೆ) |

**ಆಯುಕ್ತರು**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೮, ೨೦೧೦ (ಫಾಲ್ಗುಣ ೧೭, ಶಕ ವರ್ಷ ೧೯೩೧) | ನಂ. ೨೨೬ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/311/Bill/2009, Bangalore, Dated : 8th March, 2010**

The following Bill was introduced in Legislative Assembly on 8th March, 2010.

**THE BANGALORE WATER SUPPLY AND SEWERAGE AND CERTAIN OTHER LAWS (AMENDMENT) BILL, 2009**

**(L.A. Bill No. 42 of 2009)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಐದನೇ ಅಧಿವೇಶನ**

**ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಹಾಗೂ ಇತರ ಕೆಲವು ಕಾನೂನುಗಳು (ತಿದ್ದುಪಡಿ) ವಿಧೇಯಕ, 2009**

**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 42)**

ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಅಧಿನಿಯಮ, 1964, ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 ಹಾಗೂ ಕರ್ನಾಟಕ ಅಂತರ್ಜಲ (ಕುಡಿಯುವ ನೀರಿನ ಮೂಲಗಳ ಸಂರಕ್ಷಣೆಗಾಗಿ ನಿಯಂತ್ರಣ) ಅಧಿನಿಯಮ, 1999 – ಇವುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 36), ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) ಹಾಗೂ ಕರ್ನಾಟಕ ಅಂತರ್ಜಲ (ಕುಡಿಯುವ ನೀರಿನ ಮೂಲಗಳ ಸಂರಕ್ಷಣೆಗಾಗಿ ನಿಯಂತ್ರಣ) ಅಧಿನಿಯಮ, 1999 (2003ರ ಕರ್ನಾಟಕ ಅಧಿನಿಯಮ 44) – ಇವುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**–(1) ಈ ಅಧಿನಿಯಮವನ್ನು ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ, ಹಾಗೂ ಇತರ ಕೆಲವು ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.**– ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 36) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ), 2ನೇ ಪ್ರಕರಣದಲ್ಲಿ ,–

(ಎ) (1)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

" (1) 'ಅಪಾರ್ಟ್‌ಮೆಂಟ್' ಎಂದರೆ, ನಿವಾಸದ ಉದ್ದೇಶಗಳಿಗಾಗಿ ಉಪಯೋಗಿಸಲು ಉದ್ದೇಶಿಸಿರುವ ಒಂದು ಕಟ್ಟಡದಲ್ಲಿಯ ಒಂದು ಅಥವಾ ಹೆಚ್ಚು ಮಹಡಿಗಳಲ್ಲಿರುವ (ಅಥವಾ ಅದರ ಭಾಗ ಅಥವಾ ಭಾಗಗಳು) ಒಂದು ಅಥವಾ ಹೆಚ್ಚು ಕೊಠಡಿಗಳು ಅಥವಾ ಇರುವ ಲಗತ್ತಾದ ಸ್ಥಳಗಳು ಒಳಗೊಂಡಂತೆ ಮತ್ತು ಸಾರ್ವಜನಿಕರು ಬೀದಿ, ರಸ್ತೆ ಅಥವಾ ಹೆದ್ದಾರಿ ಅಥವಾ ಅಂಥ ಬೀದಿ, ರಸ್ತೆ ಅಥವಾ ಹೆದ್ದಾರಿಗೆ ಸೇರಿಕೊಳ್ಳುವ ಸಾಮಾನ್ಯ ಪ್ರದೇಶಕ್ಕೆ ಹೋಗಲು ನೇರ ಸಂಪರ್ಕವನ್ನು ಹೊಂದಿರುವ ಯಾವುದೇ ರೀತಿಯ ಸ್ವತಂತ್ರ ಉಪಯೋಗದ ಉದ್ದೇಶಕ್ಕಾಗಿ ಇರುವ ಸ್ವತ್ತಿನ ಭಾಗ;

(1ಎ) 'ಬೆಂಗಳೂರು ಮಹಾನಗರಪಾಲಿಕೆ ಪ್ರದೇಶ' ಎಂದರೆ, ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ಅಧಿಕಾರ ವ್ಯಾಪ್ತಿಯೊಳಗೆ ಬರುವ ಪ್ರದೇಶ ಮತ್ತು ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಪ್ರದೇಶಗಳಿಗೆ ಹೊಂದಿಕೊಂಡಿರುವ ಪ್ರದೇಶಗಳನ್ನು ಒಳಗೊಳ್ಳುತ್ತದೆ;"

(ಬಿ) (3)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) 'ಬೃಹತ್ ಬೆಂಗಳೂರು ಮಹಾನಗರ' ಎಂದರೆ, ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ ಅಡಿಯಲ್ಲಿ ರಚಿಸಲಾದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಪ್ರದೇಶ;"

(ಸಿ) (5)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(5) 'ಕಟ್ಟಡ' ಎಂಬುದು ಕಲ್ಲು ಇಟ್ಟಿಗೆಗಳು, ಮರ, ಮಣ್ಣು, ಲೋಹ ಅಥವಾ ಇತರ ಸಾಮಾಗ್ರಿಗಳಿಂದ ನಿರ್ಮಿತವಾದ, ಒಂದು ವಾಸದ ಕಟ್ಟಡ, ಮನೆ, ಔಟ್‌ಹೌಸ್, ಅಪಾರ್ಟ್‌ಮೆಂಟ್, ಎತ್ತರದ ಕಟ್ಟಡ, ವಾಣಿಜ್ಯ ಕಟ್ಟಡ, ತಾತ್ಕಾಲಿಕ ರಚನೆ, ಕೈಗಾರಿಕಾ ಕಟ್ಟಡ, ಲಾಯಕೊಟ್ಟಿಗೆ, ಶೌಚಾಲಯ, ಮೂತ್ರಿಗಳು, ಷೆಡ್, ಗುಡಿಸಲು ಅಥವಾ ಯಾವುದೇ ಇತರ ರಚನೆಗಳು ಇವುಗಳನ್ನು ಒಳಗೊಳ್ಳುತ್ತದೆ, ಆದರೆ ಇದು ಸಾಗಿಸಬಹುದಾದ ಯಾವುದೇ ಶೆಲ್ಟರನ್ನು ಒಳಗೊಳ್ಳುವುದಿಲ್ಲ."

(ಡಿ) (7)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(7) 'ಎತ್ತರದ ಕಟ್ಟಡ' ಎಂದರೆ ನಾಲ್ಕಕ್ಕಿಂತ ಹೆಚ್ಚು ಮಹಡಿಗಳನ್ನು ಎಂದರೆ, ನೆಲಮಹಡಿ + 3 ಮತ್ತು ಹೆಚ್ಚು ಮಹಡಿಗಳನ್ನು ಹೊಂದಿರುವ ಕಟ್ಟಡಗಳು;

**ವಿವರಣೆ:**– ಬಹುಮಹಡಿ ಕಟ್ಟಡಗಳನ್ನು ಸಹ ಸಾಮಾನ್ಯವಾಗಿ ಎತ್ತರದ ಕಟ್ಟಡಗಳೆಂದು ಪರಿಗಣಿಸಬಹುದು."

(ಇ) (8)ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(8ಎ) 'ಮಹಾನಗರ ಪಾಲಿಕೆ' ಎಂದರೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ;"

(ಎಫ್) (17)ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(17ಎ) 'ಪ್ರೊರೇಟಾ (ಪ್ರಮಾಣಾನುಸಾರ) ಚಾರ್ಜುಗಳು' ಎಂದರೆ, ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಗಳ ಸುಧಾರಣೆಯ ಸಂಬಂಧದಲ್ಲಿ ಮಂಡಳಿಯು ಕಾಲಕಾಲಕ್ಕೆ ವಿಧಿಸಿದ ಮತ್ತು ಯಾವುದೇ ಕಟ್ಟಡದ ಮಾಲೀಕ ಅಥವಾ ಅಧಿಭೋಗದಾರ ಅಥವಾ ಅಭಿವೃದ್ಧಿದಾರನು ಸಂದಾಯ ಮಾಡಬೇಕಾದ ಬಹುದಾದಂಥ ಅನುಪಾತಿ–ಚಾರ್ಜುಗಳು."

**3. 3ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 3ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಮಂಡಳಿಯು, ರಾಜ್ಯ ಸರ್ಕಾರವು ನೇಮಕ ಮಾಡಿದ ಮೂವರಿಗಿಂತ ಕಡಿಮೆಯಿಲ್ಲದ ಮತ್ತು ಒಂಭತ್ತಕ್ಕಿಂತ ಹೆಚ್ಚಲ್ಲದ ಸದಸ್ಯರನ್ನು ಒಳಗೊಂಡಿರತಕ್ಕದ್ದು."

(ii) (3)ನೇ ಉಪಪ್ರಕರಣದ (ಬಿ) ಖಂಡದಲ್ಲಿ "ಒಬ್ಬನು" ಎಂಬ ಪದಕ್ಕೆ "ಇಬ್ಬರು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು;

(iii) (5)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(5) ಒಬ್ಬ ವ್ಯಕ್ತಿಯು, ಅವನು ಸಂಸತ್ತಿನ ಅಥವಾ ಯಾವುದೇ ರಾಜ್ಯ ವಿಧಾನ ಮಂಡಲದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದ ಸದಸ್ಯನಾಗಿದ್ದರೆ, ಅವನು ಮಂಡಳಿಯ ಸದಸ್ಯನಾಗಿ ನೇಮಕಗೊಳ್ಳುವುದಕ್ಕೆ ಅಥವಾ ಸದಸ್ಯನಾಗಿರಲು ಅನರ್ಹನಾಗಿರತಕ್ಕದ್ದು."

**4. 12ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 12ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"12. ಸಿಬ್ಬಂದಿಯ ನೇಮಕ.–** ಮಂಡಳಿಯು, ಒಬ್ಬ ಮುಖ್ಯ ಆಡಳಿತಾಧಿಕಾರಿ ಹಾಗೂ ಕಾರ್ಯದರ್ಶಿ, ಇಂಜಿನಿಯರ್ ಇನ್ ಚೀಫ್, ಚೀಫ್ ಇಂಜಿನಿಯರ್, ನೈರ್ಮಲ್ಯ ಇಂಜಿನಿಯರುಗಳು, ನೀರು ಸರಬರಾಜು ಇಂಜಿನಿಯರುಗಳು ಮತ್ತು ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯು ತನ್ನ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ಅಗತ್ಯವಾಗಬಹುದಾದ ಅಂಥ ಇತರ ಇಂಜಿನಿಯರುಗಳು, ಅಧಿಕಾರಿಗಳು ಮತ್ತು ನೌಕರರನ್ನು ನೇಮಕ ಮಾಡಬಹುದು:

ಪರಂತು, ಮುಖ್ಯ ಆಡಳಿತಾಧಿಕಾರಿ ಹಾಗೂ ಕಾರ್ಯದರ್ಶಿ, ಇಂಜಿನಿಯರ್ ಇನ್ ಚೀಫ್, ಚೀಫ್ ಇಂಜಿನಿಯರ್, ಹೆಚ್ಚುವರಿ ಮುಖ್ಯ ಇಂಜಿನಿಯರ್‌ಗಳು, ಕಾರ್ಯಕಾರಿ ಇಂಜಿನಿಯರುಗಳ ನೇಮಕವನ್ನು ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಡನೆ ಮಾಡತಕ್ಕದ್ದು."

**5. 15ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 15ನೇ ಪ್ರಕರಣದಲ್ಲಿ (5)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(6) ಕುಡಿಯಲು ಯೋಗ್ಯವಿರದ ಅಥವಾ ಕುಡಿಯುವ ನೀರಿನ ಉದ್ದೇಶಗಳಿಗಾಗಿ, ಮಳೆನೀರಿನ ಕೊಯ್ಲು ಮತ್ತು ತ್ಯಾಜ್ಯ ಜಲ ಪುನರ್‌ಬಳಕೆಗಳಂಥ ಜಲ ಸಂರಕ್ಷಣಾ ವಿಧಾನಗಳನ್ನು ಅಳವಡಿಸಿಕೊಳ್ಳುವಂತೆ ಮಾಲೀಕ, ಅಧಿಭೋಗದಾರ ಅಥವಾ ಬಿಲ್ಡರ್‌ನನ್ನು ಒತ್ತಾಯಪಡಿಸಲು ಅಧಿಕಾರವನ್ನು ಸಹ ಮಂಡಳಿಯು, ಹೊಂದಿರತಕ್ಕದ್ದು."

(7) ಮಂಡಳಿಯು, ಅಂಥ ಕರ್ತವ್ಯಗಳ ಪರಿಣಾಮಕಾರಿ ನಿರ್ವಹಣೆಗಾಗಿ ಈ ಅಧಿನಿಯಮದ ಮೂಲಕ ಅಥವಾ ಅಡಿಯಲ್ಲಿ ಅದಕ್ಕೆ ಪ್ರದತ್ತವಾದ ಅಥವಾ ವಹಿಸಿದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು."

**6. 16ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 16ನೇ ಪ್ರಕರಣದಲ್ಲಿ (1)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಮಂಡಳಿಯು, ಈ ಅಧಿನಿಯಮದಡಿಯಲ್ಲಿ ತನ್ನ ಕಾರ್ಯಾಚರಣೆಗಳನ್ನು ಕಾರ್ಯಗತ ಗೊಳಿಸುವುದಕ್ಕಾಗಿ, ದರಗಳು, ಶುಲ್ಕಗಳು, ಬಾಡಿಗೆಗಳು, ಪ್ರೊರೇಟಾ ಚಾರ್ಜುಗಳು, ಠೇವಣಿಗಳು, ತೆರಿಗೆಗಳು ಮತ್ತು ಇತರ ಚಾರ್ಜುಗಳನ್ನು ವಿಧಿಸತಕ್ಕದ್ದು ಮತ್ತು,–

(ಎ) ಕಾರ್ಯಾಚರಣೆ ವೆಚ್ಚಗಳು, ತೆರಿಗೆಗಳು, ಬಡ್ಡಿ ಸಂದಾಯಗಳನ್ನು ಭರಿಸಲು, ಮತ್ತು ಪ್ರಸಕ್ತ ವರ್ಷದಲ್ಲಿ ವಹಿಸಿದ ಆದ ಎಲ್ಲಾ ವೆಚ್ಚಗಳೂ ಒಳಗೊಂಡಂತೆ, ಸೂಕ್ತ ನಿರ್ವಹಣೆ ಮತ್ತು ಸವಕಳಿಗಾಗಿ ಏರ್ಪಾಡು ಮಾಡಲು ಮತ್ತು ನಿವೃತ್ತಿ ವೇತನ ನಿಧಿಗೆ ದೇಣಿಗಾಗಿ;

(ಬಿ) ಸಾಲಗಳು ಮತ್ತು ಇತರ ಕಡಗಳ ಮರುಸಂದಾಯ;

(ಸಿ) ವರ್ಷದಿಂದ ವರ್ಷಕ್ಕೆ ಆಗುವ ಸುಧಾರಣೆಗಾಗಿ ಹಣಕಾಸನ್ನು ಒದಗಿಸುವುದಕ್ಕಾಗಿ; ಮತ್ತು

(ಡಿ) ಮಂಡಳಿಯು ನಿರ್ಧರಿಸಬಹುದಾದಂತೆ, ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶದಲ್ಲಿ ನೀರು ಸರಬರಾಜು ಮತ್ತು ಗ್ರಾಮಸಾರದ ವಿಲೆ ಮಾಡಲು ಅಂಥ ಇತರ ಪ್ರಯೋಜನಕಾರಿ ಉದ್ದೇಶಗಳಿಗಾಗಿ ಏರ್ಪಾಡು ಮಾಡುವುದಕ್ಕಾಗಿ,

– ಸಾಕಷ್ಟು ರಾಜಸ್ವವನ್ನು ಒದಗಿಸುವುದಕ್ಕಾಗಿ ಕಾಲಕಾಲಕ್ಕೆ ಅಂಥ ದರಗಳು, ಶುಲ್ಕಗಳು, ಬಾಡಿಗೆಗಳು, ಪ್ರೊರೇಟಾ ಚಾರ್ಜುಗಳು, ಠೇವಣಿಗಳು, ತೆರಿಗೆಗಳು ಮತ್ತು ಇತರ ಚಾರ್ಜುಗಳಲ್ಲಿ ವ್ಯತ್ಯಾಸಮಾಡತಕ್ಕದ್ದು."

**7. 21ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 21ನೇ ಪ್ರಕರಣದಲ್ಲಿ, (1)ನೇ ಉಪ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ರಾಜ್ಯ ಸರ್ಕಾರದ ಪೂರ್ವಾನುಮೋದನೆಯಿಲ್ಲದೆ ಮಂಡಳಿಯು ಯಾವುದೇ ಸಾಲವನ್ನು ಪಡೆದುಕೊಳ್ಳತಕ್ಕದ್ದಲ್ಲ."

**8. 24ಸಿ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 24ಬಿ ಪ್ರಕರಣದ ತರುವಾಯ, ಈ ಮುಂದಿನ ಹೊಸ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

**"24ಸಿ. ವಸೂಲಾಗದ ಮೊಬಲಗನ್ನು ಲೆಕ್ಕದಿಂದ ತೆಗೆದುಹಾಕುವ ಅಧಿಕಾರ.–** ಮಂಡಳಿಯು, ಅದಕ್ಕೆ ಬಾಕಿ ಇರುವ ಯಾವುದೇ ಮೊಬಲಗು ಅಥವಾ ಯಾವುದೇ ಮೊತ್ತವನ್ನು, ಅಂಥ ಮೊಬಲಗು ಅಥವಾ ಮೊತ್ತವು ವಸೂಲಾಗದ್ದೆಂದು ಅದು ಅಭಿಪ್ರಾಯಪಟ್ಟಲ್ಲಿ, ಅದನ್ನು ಲೆಕ್ಕದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರತಕ್ಕದ್ದು:

ಪರಂತು, ಮಂಡಳಿಯು ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ಮೀರಿದ ಅಂಥ ಮೊಬಲಗನ್ನು ಲೆಕ್ಕದಿಂದ ತೆಗೆದುಹಾಕುವ ಪೂರ್ವದಲ್ಲಿ ರಾಜ್ಯ ಸರ್ಕಾರದ ಮಂಜೂರಾತಿಯನ್ನು ಪಡೆಯತಕ್ಕದ್ದು."

**9. 29ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಮಂಡಳಿಯ ಯಾವುದೇ ಮುಖ್ಯ ನೀರು ಸರಬರಾಜು ಕೊಳವೆಯ ಮೇಲೆ ಯಾವುದೇ ಕಟ್ಟಡ, ಗೋಡೆ ಅಥವಾ ಇತರ ರಚನೆಯನ್ನು ರಚಿಸತಕ್ಕದ್ದಲ್ಲ ಮತ್ತು ಯಾವುದೇ ಬೀದಿಯನ್ನು ನಿರ್ಮಿಸತಕ್ಕದ್ದಲ್ಲ. ಕೊಳವೆ ಮಾರ್ಗದ ಬಳಿ ಒಂದು ಕಟ್ಟಡವನ್ನು ನಿರ್ಮಿಸಿದ್ದಾದರೆ, ಕೊಳವೆ ಮಾರ್ಗ ರಚನೆಯ ತುದಿಯಿಂದ ಕೊಳವೆ ಮಾರ್ಗಕ್ಕೆ ಅಥವಾ ಕೊಳವೆ ಮಾರ್ಗಕ್ಕೆ ಸೇರಿರುವ ಜಾಗದಿಂದ ಕನಿಷ್ಠ 1.0 ಮೀಟರು ಅಥವಾ ಕೊಳವೆ ಮಾರ್ಗದ ಅರ್ಧ ಡಯಾಮೀಟರ್ ಇದರಲ್ಲಿ ಯಾವುದು ಹೆಚ್ಚೋ ಅಷ್ಟು ಖಾಲಿ ಸ್ಥಳ ಬಿಡತಕ್ಕದ್ದು."

**10. 31ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 31ನೇ ಪ್ರಕರಣದಲ್ಲಿ, ಪರಂತುಕದಲ್ಲಿ, "ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949ರ 149ಎ ಪ್ರಕರಣದ ಮೇರೆಗೆ" ಎಂಬ ಪದಗಳಿಗೆ, "ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ ಉಪಬಂಧಗಳ ಅಡಿಯಲ್ಲಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**11. 32ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 32ನೇ ಪ್ರಕರಣದಲ್ಲಿ, (3)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) ಯಾವುದೇ ಭೂಮಿಯ ಮೇಲೆ ಒಂದು ಬೃಹತ್ ರಚನೆಯಿದ್ದು, ಅದಕ್ಕೆ ಮಂಡಳಿಯ ಮುಖ್ಯ ಗೃಹಕೃತ್ಯ ಬಳಕೆಗಾಗಿ ನೀರು ಸರಬರಾಜು ಇಲ್ಲದಿದ್ದಲ್ಲಿ ಮತ್ತು ಯಾವುದೇ ಅಂಥ ಬೃಹತ್ ರಚನೆಯ ಯಾವುದೇ ಭಾಗದಿಂದ 35 ಮೀಟರುಗಳಿಗೆ ಹೆಚ್ಚಿಲ್ಲದ ದೂರದ ಪ್ರಧಾನ ಅಂಥ ನೀರು ಸರಬರಾಜನ್ನು ಒದಗಿಸಬಹುದಾದಲ್ಲಿ, ಮಂಡಳಿಯು ನೋಟೀಸಿನ ಮೂಲಕ, ಅಂಥ ಸರಬರಾಜನ್ನು ಪಡೆದುಕೊಳ್ಳುವಂತೆ ಭೂಮಿಯ ಮಾಲೀಕ, ಗುತ್ತಿಗೆದಾರ ಅಥವಾ ಅಧಿಭೋಗದಾರನನ್ನು ಅಗತ್ಯಪಡಿಸಬಹುದು."

**12. 33ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 33ನೇ ಪ್ರಕರಣದಲ್ಲಿ, (ಎ) ಖಂಡಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎ) ಆಸ್ಪತ್ರೆಗಳು, ನರ್ಸಿಂಗ್ ಹೋಮ್‌ಗಳು, ಶೈಕ್ಷಣಿಕ ಸಂಸ್ಥೆಗಳು ಮತ್ತು ಸಮುದಾಯ ಭವನಗಳು ಒಳಗೊಂಡಂತೆ ಯಾವುದೇ ವ್ಯಾಪಾರ, ತಯಾರಿಕೆ ಅಥವಾ ವ್ಯವಹಾರಕ್ಕೆ;"

**13. 39ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 39ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ, "ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949" ಎಂಬ ಪದಗಳಿಗೆ "ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**14. 53ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 53ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ, (ಹೆಚ್) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಐ) ಕಟ್ಟಡದ ಮಾಲೀಕ ಅಥವಾ ಅಧಿಭೋಗದಾರ ಅಥವಾ ಅಭಿವೃದ್ಧಿದಾರನಿಂದ ಯಾವುವೇ ಶಾಸನಬಂಧ ಉಪಬಂಧಗಳ ಉಲ್ಲಂಘನೆಯಾಗಿದೆ ಎಂಬ ಆಧಾರದ ಮೇಲೆ ಯಾವುದೇ ಶಾಸನಬಂಧ ಪ್ರಾಧಿಕಾರದಿಂದ ಮನವಿಯನ್ನು ಸ್ವೀಕರಿಸಿದ ಮೇಲೆ:

ಪರಂತು, ನೀರಿನ ಮಾಲಿನ್ಯವು ಒಳಗೊಂಡ ಪ್ರಕರಣವನ್ನು ಹೊರತುಪಡಿಸಿ, ಮಂಡಳಿಯು, ಆವರಣದ ಮಾಲೀಕ ಅಥವಾ ಅಧಿಭೋಗದಾರನಿಗೆ ಏಳು ದಿನಗಳಿಗೆ ಕಡಿಮೆಯಿಲ್ಲದ ನೋಟೀಸನ್ನು ಕೊಡದ ಹೊರತು, ನೀರು ಸರಬರಾಜನ್ನು ನಿಲ್ಲಿಸತಕ್ಕದ್ದಲ್ಲ."

**15. 61ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 61ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದ (ಎ) ಖಂಡದಲ್ಲಿ, (ii)ನೇ ಬಾಬಿನ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(iii) ಜಲ ಸಂರಕ್ಷಣೆಗಾಗಿ ಮಳೆ ನೀರಿನ ಕೊಯ್ಲು ಮಾಡುವುದನ್ನು ಒತ್ತಾಯಪಡಿಸಲು."

(ii) (3)ನೇ ಉಪಪ್ರಕರಣದಲ್ಲಿ, "ಒಂದು ನೂರು ರೂಪಾಯಿಗಳಿಗೆ" ಮತ್ತು "ಹತ್ತು ರೂಪಾಯಿಗಳಿಗೆ" ಎಂಬ ಪದಗಳಿಗೆ ಅನುಕ್ರಮವಾಗಿ, "ಐದು ಸಾವಿರ ರೂಪಾಯಿಗಳಿಗೆ" ಮತ್ತು "ಐದುನೂರು ರೂಪಾಯಿಗಳಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**16. 62ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 62ನೇ ಪ್ರಕರಣದಲ್ಲಿ,–

(i) "ಪಾಲಿಸಲು ತಪ್ಪಿದರೆ, ಅವನು" ಎಂಬ ಪದಗಳ ತರುವಾಯ "ಆರು ತಿಂಗಳುಗಳಿಗೆ ವಿಸ್ತರಿಸಬಹುದಾದ ಕಾರಾವಾಸದೊಂದಿಗೆ, ಅಥವಾ" ಎಂಬ ಪದಗಳನ್ನು ಸೇರಿಸತಕ್ಕದ್ದು;

(ii) (i)ನೇ ಖಂಡದಲ್ಲಿ, "ಜುಲ್ಮಾನೆಯಿಂದ" ಎಂಬ ಪದಗಳ ತರುವಾಯ "ಅಥವಾ ಎರಡರಿಂದಲೂ" ಎಂಬ ಪದಗಳನ್ನು ಸೇರಿಸತಕ್ಕದ್ದು;

(iii) ಕೋಷ್ಟಕಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"ಕೋಷ್ಟಕ**

| **ಅಧಿನಿಯಮದ ಉಪಬಂಧಗಳು** | **ವಿಷಯ** | **ವಿಧಿಸಬಹುದಾದಂಥ ಗರಿಷ್ಠ ಜುಲ್ಮಾನೆ** | **ವಿಧಿಸಬಹುದಾದಂಥ ನಿತ್ಯದ ಜುಲ್ಮಾನೆ** |
|---|---|---|---|
| **1** | **2** | **3** | **4** |
| ಪ್ರಕರಣ 28 | ನೀರು ಸರಬರಾಜಿಗೆ ಸಂಬಂಧಿಸಿದ ಆವರಣದ ಮೇಲೆ ಅತಿಕ್ರಮಣ ಮಾಡುವುದು | 1000 | |
| ಪ್ರಕರಣ 30 | ವಿನಿಯಮಗಳಿಗೆ ಅನುಗುಣವಾಗಿ ಮನೆ ಜೋಡಣೆಗಳನ್ನು ಸುಸ್ಥಿತಿಯಲ್ಲಿ ಇಟ್ಟುಕೊಂಡು ಬರುವುದಕ್ಕೆ ತಪ್ಪುವುದು | 1000 | |
| ಪ್ರಕರಣ 32 ಉಪಪ್ರಕರಣ (2) | ಸರಿಯಾದ ನೀರು ಸರಬರಾಜು ಇಲ್ಲದ ಮನೆಯನ್ನು ಅಧಿಭೋಗಕ್ಕೆ ತೆಗೆದುಕೊಳ್ಳುವುದು ಅಥವಾ ಅಧಿಭೋಗಕ್ಕೆ ಅವಕಾಶ ಮಾಡಿಕೊಡುವುದು | 1000 | |
| ಪ್ರಕರಣ 32 ಉಪಪ್ರಕರಣ (3) | ಮನೆ ಜೋಡಣೆಗಳನ್ನು ಮಾಡುವ ಬಗ್ಗೆ ಕಡ್ಡಾಯ ಕೋರಿಕೆಯನ್ನು ಪಾಲಿಸಲು ತಪ್ಪುವುದು | 1000 | 100 |
| ಪ್ರಕರಣ 34 | ಗೃಹ ಉದ್ದೇಶಗಳಿಗಾಗಿ ಸರಬರಾಜು ಮಾಡಿದ ನೀರನ್ನು ಗೃಹೇತರ ಉದ್ದೇಶಗಳಿಗಾಗಿ ಉಪಯೋಗಿಸುವುದು | 5000 | 100 |
| ಪ್ರಕರಣ 49 | ನೀರಿನ ಪೋಲು ಅಥವಾ ಅದರ ದುರುಪಯೋಗ | 5000 | |
| ಪ್ರಕರಣ 50 | ಪ್ರವೇಶಿಸಲು ಅವಕಾಶ ನೀಡುವುದು ಇತ್ಯಾದಿಗಳನ್ನು ನಿರಾಕರಿಸುವುದು | 1000 | |

| | | | |
|---|---|---|---|
| ಪ್ರಕರಣ 52 ಉಪಪ್ರಕರಣ (1) | ನೀರಿನ ಕೊಳವೆಗಳು ಮುಂತಾದವುಗಳನ್ನು ಅವುಗಳಿಗೆ ಹಾನಿಯಾಗಬಹುದಾದ ಅಥವಾ ಅದರಲ್ಲಿ ನೀರು ಮಲಿನವಾಗಬಹುದಾದ ಸ್ಥಳದಲ್ಲಿ ಹಾಕುವುದು | 5000 | 100 |
| ಪ್ರಕರಣ 52 ಉಪಪ್ರಕರಣ (2) | ಕೊಳವೆಗಳು, ಹಾನಿಯಾಗಬಹುದಾದ ಅಥವಾ ಅದರಲ್ಲಿನ ನೀರು ಮಲಿನಗೊಳ್ಳಬಹುದಾದ ಸ್ಥಳದಲ್ಲಿ ಶೌಚಾಲಯಗಳು ಇತ್ಯಾದಿಗಳನ್ನು ನಿರ್ಮಿಸುವುದು | 5000 | 100 |
| ಪ್ರಕರಣ 59 ಉಪಪ್ರಕರಣ (1) | ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಯಾವೊಬ್ಬ ಇತರ ವ್ಯಕ್ತಿಯಿಂದ ಕಾಮಗಾರಿಯ ನಿರ್ವಹಣೆ | 2000 | |
| ಪ್ರಕರಣ 59 ಉಪಪ್ರಕರಣ (2) | ನಿಯೋಜಿಸಿಕೊಂಡ ಲೈಸೆನ್ಸು ಪಡೆದ ಕೊಳಾಯಿಗಾರನ ಹೆಸರನ್ನು, ಅಗತ್ಯಪಡಿಸಿದಾಗ, ಒದಗಿಸಲು ತಪ್ಪುವುದು | 1000 | |
| ಪ್ರಕರಣ 59 ಉಪಪ್ರಕರಣ (6) | ಲೈಸೆನ್ಸ್ ಪಡೆದ ಕೊಳಾಯಿಗಾರನು ನಿಯಮಿಸಿದ ಚಾರ್ಜುಗಳಿಗಿಂತ ಹೆಚ್ಚಿನದನ್ನು ತಗಾದೆ ಮಾಡತಕ್ಕದ್ದಲ್ಲ. | 1000 | |
| ಪ್ರಕರಣ 59 ಉಪಪ್ರಕರಣ (8) | ಲೈಸೆನ್ಸ್ ಪಡೆದ ಕೊಳಾಯಿಗಾರನು ವಿನಿಯಮಗಳನ್ನು ಉಲ್ಲಂಘಿಸಬಾರದು ಅಥವಾ ಅಜಾಗರೂಕತೆಯಿಂದ ಅಥವಾ ನಿರ್ಲಕ್ಷ್ಯೆಯಿಂದ ಕಾಮಗಾರಿಯನ್ನು ನಿರ್ವಹಿಸಬಾರದು | 1000 | |
| ಪ್ರಕರಣ 60ರ ಉಪಪ್ರಕರಣ ಎ, ಬಿ, ಡಿ ಮತ್ತು ಇ | ನೀರು ಸರಬರಾಜು ಕಾಮಗಾರಿಗಳಿಗೆ ಸಂಬಂಧಪಟ್ಟಂತೆ ಉದ್ದೇಶಪೂರ್ವಕ ಅಥವಾ ನಿರ್ಲಕ್ಷ್ಯತೆಯ ಕಾರ್ಯನಿರ್ವಹಣೆಯ ಬಗ್ಗೆ ನಿಷೇಧ | 5000 | |

**17. 66ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 66ನೇ ಪ್ರಕರಣದಲ್ಲಿ, (3)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(4) ಗ್ರಾಮಸಾರ ಚರಂಡಿ ಜೋಡಣೆಯನ್ನು ಹೊಂದಿರುವ ಕಟ್ಟಡದ ಪ್ರತಿಯೊಬ್ಬ ಮಾಲೀಕ ಅಥವಾ ಅಧಿಭೋಗದಾರನು, ಮಂಡಳಿಯು, ವಿನಿಯಮದ ಮೂಲಕ ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ಗ್ರಾಮಸಾರ ಚರಂಡಿ ಚಾರ್ಜುಗಳನ್ನು ಪಾವತಿಸತಕ್ಕದ್ದು.

**18. 72ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 72ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**72. ಗ್ರಾಮಸಾರ ಚರಂಡಿ ವ್ಯವಸ್ಥೆ ಮತ್ತು ಮಳೆಯ ನೀರಿನ ಚರಂಡಿಗಳು ಪ್ರತ್ಯೇಕವಾಗಿರುವುದು.–** ಈ ಅಧ್ಯಾಯದಲ್ಲಿ, ಯಾವುದೇ ಆವರಣದ ಪರಿಣಾಮಕಾರಿ ಚರಂಡಿ ವ್ಯವಸ್ಥೆಗಾಗಿ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಅಥವಾ ಕೈಗೊಳ್ಳಬಹುದೆಂದು, ಉಪಬಂಧಿಸಿರುವ ಕಡೆಗಳಲ್ಲೆಲ್ಲಾ, ಹೊಲಸು ಮತ್ತು ಕಲುಷಿತವಾದ ನೀರು ಮಂಡಳಿಯ ಗ್ರಾಮಸಾರ ಚರಂಡಿಗೆ, ಸಂಪರ್ಕ ಕಲ್ಪಿಸುವ ಒಂದು ಚರಂಡಿ ಮತ್ತು ಮಳೆನೀರು ಹಾಗೂ ಕಲುಷಿತವಲ್ಲದ ಅಂತರ್ಜಲ ಅಥವಾ ಮಳೆಯ ನೀರು ಮತ್ತು ಕಲುಷಿತವಲ್ಲದ ಅಂತರ್ಜಲ ಇವೆರಡಕ್ಕೂ ಪೂರ್ಣವಾಗಿ ಪ್ರತ್ಯೇಕವಾದ ಚರಂಡಿಯ ಮಳೆ ನೀರು ಕೊಯ್ಲಿನ ವ್ಯವಸ್ಥೆಯಲ್ಲಿ ಅಥವಾ ಇತರ ಸೂಕ್ತ ಸ್ಥಳಗಳಲ್ಲಿ ಪಾಲಿಕೆಯ ಚರಂಡಿಯು ಸೇರಿ ಖಾಲಿಯಾಗುವುದಕ್ಕೆ ಒಂದು ಚರಂಡಿ ಇರತಕ್ಕದ್ದು ಎಂದು ಅಗತ್ಯಪಡಿಸುವುದು ಮಂಡಳಿಗೆ ಸಕ್ಷಮವಾಗಿರತಕ್ಕದ್ದು."

**19. 75ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 75ನೇ ಪ್ರಕರಣದ ತರುವಾಯ ಈ ಮುಂದಿನ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

"**75ಎ. ಮಂಡಳಿಯು ಗ್ರಾಮಸಾರ ಚರಂಡಿ ಸಂಪರ್ಕವನ್ನು ನಿಲ್ಲಿಸುವುದು.–** ಮಂಡಳಿಯು,–

(ಎ) ಆವರಣಗಳಲ್ಲಿ ಯಾರೂ ವಾಸಿಸುತ್ತಿಲ್ಲದಿದ್ದರೆ;

(ಬಿ) ಮಾಲೀಕ ಅಥವಾ ಅಧಿಭೋಗದಾರನು, ಈ ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸಿದ್ದರೆ ಅಥವಾ ಮಂಡಳಿಯು, ನೀರು ಸರಬರಾಜು ಅಥವಾ ಗ್ರಾಮಸಾರ ಚರಂಡಿ ಸಂಪರ್ಕಕ್ಕೆ ಸಂಬಂಧಿಸಿದಂತೆ ಹೊರಡಿಸಿದ ಯಾವುದೇ ಕಾನೂನುಬದ್ಧ ಆದೇಶ ಅಥವಾ ಅಗತ್ಯತೆಗಳನ್ನು, ಅದರಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಪಾಲಿಸಲು ನಿರ್ಲಕ್ಷಿಸಿದರೆ;

(ಸಿ) ನೀರು ಸರಬರಾಜು ಅಥವಾ ಗ್ರಾಮಸಾರ ಚರಂಡಿ ಸಂಪರ್ಕದ ಸಂಬಂಧದಲ್ಲಿ ಬಾಕಿ ಇರುವ ಯಾವುದೇ ಚಾರ್ಜುಗಳನ್ನು ಅಥವಾ ಯಾವುದೇ ಇತರ ಮೊತ್ತವನ್ನು ಅಥವಾ ನೀರು ಸರಬರಾಜು ಅಥವಾ ಗ್ರಾಮಸಾರ ಚರಂಡಿಗೆ ಸಂಬಂಧಿಸಿದಂತೆ ಕೈಗೊಂಡ ಕಾಮಗಾರಿ ಅಥವಾ ಪರೀಕ್ಷೆಗಳ ವೆಚ್ಚವನ್ನು, ಈ ಅಧಿನಿಯಮದ ಅಡಿಯಲ್ಲಿ ಮಾಲೀಕ ಅಥವಾ ಅಧಿಭೋಗದಾರನಿಗೆ ವಿಧಿಸಿದ ಚಾರ್ಜುಗಳನ್ನು, ಅಂಥ ಚಾರ್ಜುಗಳ ಬಿಲ್ಲುಗಳನ್ನು ನೀಡಿದ ತರುವಾಯ ಹದಿನೈದು ದಿನಗಳೊಳಗೆ ಸಂದಾಯಮಾಡಲು ತಪ್ಪಿದರೆ;

(ಡಿ) ಕಟ್ಟಡದ ಮಾಲೀಕ/ ಅಧಿಭೋಗದಾರ/ ಅಭಿವೃದ್ಧಿದಾರನು ಯಾವುದೇ ಶಾಸನಾತ್ಮಕ ಉಪಬಂಧಗಳನ್ನು ಉಲ್ಲಂಘಿಸಿದ್ದಾನೆಂಬ ಆಧಾರದ ಮೇಲೆ ಯಾವುದೇ ಶಾಸನಬದ್ಧ ಪ್ರಾಧಿಕಾರದಿಂದ ಮನವಿಯನ್ನು ಸ್ವೀಕರಿಸಿದ ಮೇಲೆ,

– ಯಾವುವೇ ಆವರಣಗಳಿಗೆ ಗ್ರಾಮಸಾರ ಚರಂಡಿ ಸಂಪರ್ಕವನ್ನು ನಿಲ್ಲಿಸಬಹುದು."

**20. 76ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 76ನೇ ಪ್ರಕರಣದ (1) ಮತ್ತು (2)ನೇ ಉಪಪ್ರಕರಣಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಮಂಡಳಿಯು ನಿರ್ಮಿಸಿದ ಅಥವಾ ಅದರ ನಿರ್ವಹಣೆಯಲ್ಲಿರುವ ಅಥವಾ ಅದರಲ್ಲಿ ನಿಹಿತವಾದ ಮಂಡಳಿಯ ಯಾವುದೇ ಗ್ರಾಮಸಾರ ಚರಂಡಿಯ ಮೇಲೆ ಖಾಸಗಿ ಬೀದಿಯನ್ನು ನಿರ್ಮಿಸತಕ್ಕದ್ದಲ್ಲ ಮತ್ತು ಕಟ್ಟಡ, ಗೋಡೆ, ಬೇಲೆ ಅಥವಾ ಇತರ ರಚನೆಗಳನ್ನು ನಿರ್ಮಿಸತಕ್ಕದ್ದಲ್ಲ. ಗ್ರಾಮಸಾರ ಚರಂಡಿಯ ಹತ್ತಿರವೇ ರಚನೆಯನ್ನು ಮಾಡಿದ್ದಾಗ್ಯೂ ಗ್ರಾಮಸಾರ ಚರಂಡಿಯ ಅಥವಾ ಗ್ರಾಮಸಾರ ಚರಂಡಿಯ ಮ್ಯಾನ್‌ಹೋಲ್‌ನಿಂದ ಕನಿಷ್ಠ 1.0 ಮೀ. ಅಥವಾ ಗ್ರಾಮಸಾರ ಚರಂಡಿಯ ಅರ್ಧ ಡಯಾಮೀಟರ್ (ಇವುಗಳಲ್ಲಿ ಯಾವುದು ಹೆಚ್ಚೋ ಅದು) ಖಾಲಿ ಸ್ಥಳ ಬಿಟ್ಟಿರತಕ್ಕದ್ದು."

(2) ಮೇಲೆ ಹೇಳಿದುದನ್ನು ಉಲ್ಲಂಘಿಸಿ ಯಾವುದೇ ಖಾಸಗಿ ಬೀದಿಯನ್ನು ನಿರ್ಮಿಸಿದಲ್ಲಿ ಅಥವಾ ಯಾವುದೇ ಕಟ್ಟಡ, ಗೋಡೆ, ಮುಳ್ಳುಬೇಲಿ ಅಥವಾ ರಚನೆಗಳನ್ನು ನಿರ್ಮಿಸಿದರೆ, ಮಂಡಳಿಯು ಅದನ್ನು ತೆಗೆದುಹಾಕಬಹುದು ಅಥವಾ ಅದು ಸೂಕ್ತವೆಂದು ಭಾವಿಸಬಹುದಾದಂತೆ ಅನ್ಯಥಾ ವ್ಯವಹರಿಸಬಹುದು."

**21. 84ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 84ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ "ಒಂದುನೂರು ರೂಪಾಯಿಗಳಿಗೆ" ಮತ್ತು "ಹತ್ತು ರೂಪಾಯಿಗಳಿಗೆ" ಎಂಬ ಪದಗಳಿಗೆ ಅನುಕ್ರಮವಾಗಿ "ಐದು ಸಾವಿರ ರೂಪಾಯಿಗಳಿಗೆ" ಮತ್ತು "ಐದುನೂರು ರೂಪಾಯಿಗಳಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**22. 85ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 85ನೇ ಪ್ರಕರಣದಲ್ಲಿ,–

(i) "ಪಾಲಿಸಲು ತಪ್ಪಿದರೆ, ಅವನು" ಎಂಬ ಪದಗಳಿಗೆ "ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ದಂಡಿತನಾಗತಕ್ಕದ್ದು, ಅಥವಾ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (i)ನೇ ಖಂಡದಲ್ಲಿ, "ಜುಲ್ಮಾನೆಯಿಂದ" ಎಂಬ ಪದಗಳ ತರುವಾಯ "ಅಥವಾ ಅವೆರಡರಿಂದಲೂ" ಎಂಬ ಪದಗಳನ್ನು ಸೇರಿಸತಕ್ಕದ್ದು.

(iii) ಕೋಷ್ಟಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"ಕೋಷ್ಟಕ**

| ಅಧಿನಿಯಮದ ಉಪಬಂಧಗಳು | ವಿಷಯ | ವಿಧಿಸಬಹುದಾದಂಥ ಗರಿಷ್ಠ ಜುಲ್ಮಾನೆ | ವಿಧಿಸಬಹುದಾದಂಥ ದೈನಂದಿನ ಜುಲ್ಮಾನೆ |
|---|---|---|---|
| 1 | 2 | 3 | 4 |
| ಪ್ರಕರಣ 65 | ಮಂಡಳಿಯ ಗ್ರಾಮಸಾರ ಚರಂಡಿಗಳು ಅಥವಾ ಮಂಡಳಿಯ ಗ್ರಾಮಸಾರ ಚರಂಡಿಗಳೊಂದಿಗೆ ಸಂಪರ್ಕವನ್ನು ಹೊಂದಿರುವ ಚರಂಡಿಗಳಲ್ಲಿ ಅಥವಾ ಗ್ರಾಮಸಾರ ಚರಂಡಿಗಳಲ್ಲಿ ನೀರು ನಿರಾತಂಕವಾಗಿ ಹರಿದು ಹೋಗುವುದಕ್ಕೆ ಹಾನಿ ಅಥವಾ ಅಡ್ಡಿಯನ್ನುಂಟುಮಾಡುವುದು | 5000 | 500 |
| ಪ್ರಕರಣ 66 ಉಪಪ್ರಕರಣ (2) | ನೋಟೀಸು ಇಲ್ಲದೆ ಮಂಡಳಿಯ ಗ್ರಾಮಸಾರ ಚರಂಡಿಗಳೊಂದಿಗೆ ಖಾಸಗಿ ಚರಂಡಿಯನ್ನು ಕೂಡಿಸತಕ್ಕದ್ದಲ್ಲ | 1000 | 100 |
| ಪ್ರಕರಣ 67 | ಚರಂಡಿ ವ್ಯವಸ್ಥೆ ಇಲ್ಲದ ಆವರಣಕ್ಕೆ ಚರಂಡಿ ವ್ಯವಸ್ಥೆ ಮಾಡಲು ಕಡ್ಡಾಯ ಕೋರಿಕೆಯನ್ನು ಪಾಲಿಸದಿರುವುದು | 2000 | 200 |

| | | | |
|---|---|---|---|
| ಪ್ರಕರಣ 68 | ಚರಂಡಿಗಳಿಲ್ಲದೇ ಹೊಸ ಆವರಣದ ನಿರ್ಮಾಣ | 5000 | |
| ಪ್ರಕರಣ 69 | ಆವರಣಗಳ ಯಾವುದೇ ಗುಂಪು ಅಥವಾ ಬ್ಲಾಕುಗಳಿಗಾಗಿ ಚರಂಡಿ ವ್ಯವಸ್ಥೆಯ ಕಾಮಗಾರಿಗಳ ನಿರ್ವಹಣೆಗಾಗಿ ಮಾಡಿದ ಕೋರಿಕೆಯನ್ನು ಪಾಲಿಸದಿರುವುದು | 5000 | |
| ಪ್ರಕರಣ 70 | ಕೆಲವು ಸಂದರ್ಭಗಳಲ್ಲಿ ಖಾಸಗಿ ಚರಂಡಿಗಳನ್ನು ಮುಚ್ಚಲು ಅಥವಾ ಅವುಗಳ ಉಪಯೋಗವನ್ನು ಸೀಮಿತಗೊಳಿಸುವ ನಿರ್ದೇಶನವನ್ನು ಪಾಲಿಸದಿರುವುದು. | 5000 | |
| ಪ್ರಕರಣ 71 | ಚರಂಡಿಯ ಒಡೆಯನಲ್ಲದ ಇತರ ವ್ಯಕ್ತಿಯು ಅದನ್ನು ಉಪಯೋಗಿಸುವುದರ ಬಗ್ಗೆ ನೈರ್ಮಲ್ಯ ಇಂಜಿನಿಯರನ ಆದೇಶಗಳನ್ನು ಪಾಲಿಸದಿರುವುದು | 5000 | |
| ಪ್ರಕರಣ 72 | ಗ್ರಾಮಸಾರ ಚರಂಡಿ ವ್ಯವಸ್ಥೆ ಮತ್ತು ಮಳೆಯ ನೀರು ಚರಂಡಿಗಳನ್ನು ಪ್ರತ್ಯೇಕವಾಗಿಡುವುದಕ್ಕಾಗಿ ಮಾಡಿದ ಕೋರಿಕೆಯನ್ನು ಪಾಲಿಸದಿರುವುದು | 5000 | |
| ಪ್ರಕರಣ 73 | ಅಂಗಳ ಇತ್ಯಾದಿಗಳನ್ನು ನೆಲಗಟ್ಟು ಮಾಡುವುದಕ್ಕಾಗಿ ಮಾಡಿದ ಕೋರಿಕೆಯನ್ನು ಪಾಲಿಸದಿರುವುದು | 1000 | |
| ಪ್ರಕರಣ 75 | ಲಿಖಿತ ಅನುಮತಿ ಇಲ್ಲದೆ ಮಂಡಳಿಯ ಗ್ರಾಮಸಾರ ಚರಂಡಿಗಳೊಂದಿಗೆ ಸಂಪರ್ಕ ಕಲ್ಪಿಸುವುದು | 5000 | 500 |
| ಪ್ರಕರಣ 78 ಉಪಪ್ರಕರಣ (4) | ಕೊಳವೆ ಅಥವಾ ಚರಂಡಿಯನ್ನು ಮುಚ್ಚಲು, ತೆಗೆದುಹಾಕಲು ಅಥವಾ ಮಾರ್ಗಪಲ್ಲಟ ಮಾಡುವ ಬಗ್ಗೆ ಮಾಡಿದ ಕೋರಿಕೆಯನ್ನು ಪಾಲಿಸದಿರುವುದು | 5000 | 500 |
| ಪ್ರಕರಣ 82 ಉಪಪ್ರಕರಣ (1) | ಲೈಸೆನ್ಸು ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ, ಇತರ ವ್ಯಕ್ತಿಯು ಕಾಮಗಾರಿಯನ್ನು ನಿರ್ವಹಿಸುವುದು | 5000 | |
| ಪ್ರಕರಣ 82, ಉಪಪ್ರಕರಣ (2) ಪ್ರಕರಣ 59 (2) ಇದರೊಂದಿಗೆ ಓದಿಕೊಂಡು | ನಿಯೋಜಿಸಿಕೊಂಡ ಲೈಸೆನ್ಸು ಪಡೆದ ಕೊಳಾಯಿಗಾರನ ಹೆಸರನ್ನು ಒದಗಿಸಲು ಅಗತ್ಯಪಡಿಸಿದಾಗ ತಪ್ಪುವುದು | 1000 | |
| ಪ್ರಕರಣ 82 ಉಪಪ್ರಕರಣ (6) ಪ್ರಕರಣ 59 (2) ಇದರೊಂದಿಗೆ ಓದಿಕೊಂಡು | ಲೈಸೆನ್ಸು ಪಡೆದ ಕೊಳಾಯಿಗಾರರು ನಿಯಮಿಸಿದ ಚಾರ್ಜುಗಳಿಗಿಂತ ಹೆಚ್ಚಿಗೆ ತಗಾದೆಮಾಡಕೂಡದು | 5000 | |
| ಪ್ರಕರಣ 82 ಉಪಪ್ರಕರಣ (8) ಪ್ರಕರಣ 59 (2) ಇದರೊಂದಿಗೆ ಓದಿಕೊಂಡು | ಲೈಸೆನ್ಸು ಪಡೆದ ಕೊಳಾಯಿಗಾರರು ವಿನಿಯಮಗಳನ್ನು ಉಲ್ಲಂಘಿಸಕೂಡದು ಅಥವಾ ಕಾಮಗಾರಿಯನ್ನು ಅಜಾಗರೂಕತೆ ಅಥವಾ ನಿರ್ಲಕ್ಷ್ಯತೆ ಯಿಂದ ನಿರ್ವಹಿಸಕೂಡದು, ಇತ್ಯಾದಿ | 5000 | |
| ಪ್ರಕರಣ 83 | ಗ್ರಾಮಸಾರ ಚರಂಡಿ ಕಾಮಗಾರಿಗಳಿಗೆ ಸಂಬಂಧಪಟ್ಟಂತೆ ಉದ್ದೇಶಪೂರ್ವಕವಾದ ಅಥವಾ ನಿರ್ಲಕ್ಷ್ಯತೆಯ ಕೃತ್ಯಗಳ ನಿಷೇಧ | 5000 | |

**23. 88ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 88ನೇ ಪ್ರಕರಣದ (ಡಿ) ಖಂಡದಲ್ಲಿ "ಒಂದುನೂರು ರೂಪಾಯಿಗಳಿಗೆ ಮತ್ತು "ಹತ್ತು ರೂಪಾಯಿಗಳಿಗೆ" ಎಂಬ ಪದಗಳಿಗೆ ಅನುಕ್ರಮವಾಗಿ "ಐದು ಸಾವಿರ ರೂಪಾಯಿಗಳಿಗೆ" ಮತ್ತು "ಐದುನೂರು ರೂಪಾಯಿಗಳಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**24. 89ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 89ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**89. ರಾಜ್ಯ ಸರ್ಕಾರದಿಂದ ನಿರ್ದೇಶನಗಳು.–** ರಾಜ್ಯ ಸರ್ಕಾರವು, ಈ ಅಧಿನಿಯಮದ ಅಡಿಯಲ್ಲಿಯ ಪ್ರಕಾರ್ಯಗಳನ್ನು ನೆರವೇರಿಸುವ ಉದ್ದೇಶಕ್ಕಾಗಿ ತಾನು ಸೂಕ್ತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ಮಂಡಳಿಗೆ ನೀಡಬಹುದು ಮತ್ತು ಮಂಡಳಿಯು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು."

**25. 107ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 107ನೇ ಪ್ರಕರಣದ ತರುವಾಯ ಈ ಮುಂದಿನ ಹೊಸ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

"**107ಎ. ವಿಳಂಬ ಸಂದಾಯಗಳ ಮೇಲೆ ಬಡ್ಡಿ.–** ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಅಡಿಯಲ್ಲಿ ರಚಿಸಿದ ಯಾವುದೇ ನಿಯಮ, ವಿನಿಯಮ ಅಥವಾ ಆದೇಶದ ಅಡಿಯಲ್ಲಿ, ಯಾವುದೇ ಚಾರ್ಜು, ವೆಚ್ಚಗಳು, ಖರ್ಚುಗಳು, ಫೀಜುಗಳು, ದರಗಳು ಅಥವಾ ಬಾಡಿಗೆ, ಪ್ರೊರೇಟಾ ಚಾರ್ಜುಗಳ ಅಥವಾ ಇತರ ಯಾವುದೇ ಮೊಬಲಗಿನ ಸಂಬಂಧದಲ್ಲಿ ಮಂಡಳಿಗೆ ಬಾಕಿಯಿರುವ ಯಾವುದೇ ಮೊತ್ತದ ಮೇಲೆ, ಅವು ಬಾಕಿಯಾದ ದಿನಾಂಕದಿಂದ ಅವುಗಳನ್ನು ಸಂದಾಯ ಮಾಡುವ ಅಥವಾ ವಸೂಲ್ಮಾಡುವ ದಿನಾಂಕದವರೆಗೆ, ಮಂಡಲಿಯು ಕಾಲಕಾಲಕ್ಕೆ ನಿಗದಿಪಡಿಸಿದ ದರದಲ್ಲಿ ಬಡ್ಡಿಯನ್ನು ವಿಧಿಸತಕ್ಕದ್ದು."

**26. 108ಎ ಮತ್ತು 108ಬಿ ಹೊಸ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 108ನೇ ಪ್ರಕರಣದ ತರುವಾಯ ಈ ಮುಂದಿನ ಹೊಸ ಪ್ರಕರಣಗಳನ್ನು ಸೇರಿಸತಕ್ಕದ್ದು, ಎಂದರೆ:–

"**108ಎ. ನೀರಿನ ಕಳ್ಳತನ.– (1)** ಕಾನೂನು ಬಾಹಿರ ಜೋಡಣೆಯ ಮೂಲಕ ಅಪ್ರಾಮಾಣಿಕವಾಗಿ ನೀರು ಸರಬರಾಜನ್ನು ಪಡೆಯುವನೋ ಅಥವಾ ಮೀಟರನ್ನು ಕೆಡಿಸುವನೋ ಅಥವಾ ನೀರಿನ ಬಳಕೆಯು ದಾಖಲಾಗದಂತೆ ಅಥವಾ ತಪ್ಪಾಗಿ ದಾಖಲಾಗುವಂತೆ ಮಾಡುವ ಯಾವುದೇ ರೀತಿಯಲ್ಲಿ ಕೆಡಿಸಿದ ಮೀಟರನ್ನು ಬಳಸುವ ಅಥವಾ ಬಳಸಿದ ನೀರಿನ ನಿಖರವಾದ ಮಾಪನವನ್ನು ತಡೆಯುವುದಕ್ಕಾಗಿ ನೀರಿನ ಮೀಟರು/ಸಲಕರಣೆಯನ್ನು ಹಾನಿಗೊಳಿಸುವ ಅಥವಾ ನಾಶಪಡಿಸುವ ಯಾವೊಬ್ಬನು, ಮೂರು ವರ್ಷಗಳಿಗೆ ವಿಸ್ತರಿಸಬಹುದಾದ ಅವಧಿಗೆ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ; ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು.

(2) ಗ್ರಾಹಕನು ಮೀಟರಿನಲ್ಲಿ ದಾಖಲಾಗದಂತೆ ನೀರಿನ ಬಳಕೆ ಅಥವಾ ಉಪಯೋಗಕ್ಕಾಗಿ ಯಾವುದೇ ಕೃತಕ ಉಪಕರಣಗಳು ಅಥವಾ ಮಂಡಳಿಯಿಂದ ಅಧಿಕೃತವಾಗಿಲ್ಲದ ಯಾವುದೇ ಉಪಕರಣಗಳನ್ನು ಇಟ್ಟಿದ್ದಾನೆಂದ ರುಜುವಾತಾದರೆ, ಇದಕ್ಕೆ ವಿರುದ್ಧವಾದುದು ರುಜುವಾತಾಗುವವರೆಗೆ, ಅಂಥ ಗ್ರಾಹಕನು ನೀರಿನ ಬಳಕೆ ಅಥವಾ ಉಪಯೋಗವನ್ನು ಅಪ್ರಾಮಾಣಿಕವಾಗಿ ಮಾಡಿದ್ದಾನೆ ಎಂದು ಪೂರ್ವಭಾವನೆ ಮಾಡತಕ್ಕದ್ದು.

**108ಬಿ. ದುಷ್ಪ್ರೇರಣೆ.–** ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ, ವಿಧಿಸಬಹುದಾದ ಯಾವುದೇ ದಂಡ ಅಥವಾ ಜುಲ್ಮಾನೆಗೆ ಅಥವಾ ಪ್ರಾರಂಭಿಸಬಹುದಾದ ಪ್ರಾಸಿಕ್ಯೂಷನ್ ವ್ಯವಹರಣೆಗೆ ಬಾಧಕವಾಗದಂತೆ, ಮಂಡಳಿಯ ಯಾವೊಬ್ಬ ಅಧಿಕಾರಿ ಅಥವಾ ಸಿಬ್ಬಂದಿಯು ಒಳಗೊಂಡಂತೆ, ಯಾರೊಬ್ಬರು ಅಥವಾ ಲೈಸೆನ್ಸು ಹೊಂದಿದ ಕೊಳಾಯಿದಾರನು, ಈ ಅಧಿನಿಯಮದಡಿಯಲ್ಲಿ ದಂಡನೀಯವಾದ ಒಂದು ಅಪರಾಧವನ್ನು ದುಷ್ಪ್ರೇರಿಸಿದಲ್ಲಿ ಅಥವಾ ನೀರಿನ ಯಾವುದೇ ಕಳ್ಳತನ ಆದಾಗ, ಯಾವುದೇ ರೀತಿಯಲ್ಲಿ ಅದಕ್ಕೆ ಒಪ್ಪಿಗೆ ನೀಡಿದ್ದಲ್ಲಿ ಅಥವಾ ಮೌನ ಸಮ್ಮತಿ ನೀಡಿದ್ದಲ್ಲಿ, ಹಾಗೆ ಮಾಡುವುದರಿಂದ ವಿಮುಖನಾದಲ್ಲಿ, ಯಾವುದೇ ಕೃತ್ಯಕ್ಕೆ ಅನುಮತಿಸಿದ್ದಲ್ಲಿ, ಮರೆ ಮಾಚಿದಲ್ಲಿ ಅಥವಾ ಪರೋಕ್ಷ ಸಮ್ಮತಿ ನೀಡಿದ್ದಲ್ಲಿ, ಈ ಅಧಿನಿಯಮದಲ್ಲಿ ಉಪಬಂಧಿಸಲಾದ ಅಪರಾಧಕ್ಕಾಗಿ ವಿಧಿಸುವಂಥದ್ದೇ ದಂಡವನ್ನು ವಿಧಿಸತಕ್ಕದ್ದು."

**27. 109ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 109ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**109. ಸಾಮಾನ್ಯ ದಂಡ.–** ಈ ಅಧಿನಿಯಮದಲ್ಲಿ ದಂಡವನ್ನು ಸ್ಪಷ್ಟವಾಗಿ ಉಪಬಂಧಿಸಿರದ ಯಾವುದೇ ಪ್ರಕರಣದಲ್ಲಿ, ಈ ಅಧಿನಿಯಮದ ಉಪಬಂಧದ ಅಥವಾ ಯಾವುದೇ ನಿಯಮದ ಅಥವಾ ವಿನಿಯಮದ ಅಥವಾ ಉಪವಿಧಿಯ ಅಡಿಯಲ್ಲಿ ಹೊರಡಿಸಲಾದ ಯಾವುದೇ ನೋಟೀಸು, ಆದೇಶ ಅಥವಾ ಕೋರಿಕೆಯನ್ನು ಪಾಲಿಸುವಲ್ಲಿ ವಿಫಲನಾದ ಅಥವಾ ಈ ಅಧಿನಿಯಮದ ಯಾವುದೇ ಉಪಬಂಧಗಳು ಅಥವಾ ಯಾವುದೇ ನಿಯಮ ಅಥವಾ ವಿನಿಯಮ ಅಥವಾ ಉಪವಿಧಿಗಳನ್ನು ಅನ್ಯಥಾ ಉಲ್ಲಂಘಿಸಿದ ಯಾವೊಬ್ಬನು, ಆತನು ಆರು ತಿಂಗಳಿಗೆ ವಿಸ್ತರಿಸಬಹುದಾದ ಕಾರಾವಾಸದ ದಂಡದಿಂದ ಅಥವಾ ಐದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು. ವಿಫಲತೆ ಅಥವಾ ಉಲ್ಲಂಘನೆಯು ಮುಂದುವರಿಯುತ್ತಿದ್ದ ಸಂದರ್ಭದಲ್ಲಿ, ಅಂಥ ಮೊದಲನೇ ವಿಫಲತೆ

ಅಥವಾ ಉಲ್ಲಂಘನೆಗಾಗಿ, ಅಪರಾಧ ನಿರ್ಣಯವಾದ ತರುವಾಯ ಅಂಥ ವಿಫಲತೆ ಅಥವಾ ಉಲ್ಲಂಘನೆಯು ಮುಂದುವರೆದ ಪ್ರತಿಯೊಂದು ದಿನಕ್ಕೆ ಐದುನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದ ಹೆಚ್ಚುವರಿ ಜುಲ್ಮಾನೆಯೊಂದಿಗೆ ದಂಡಿತನಾಗತಕ್ಕದ್ದು."

**28. 109ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 109ನೇ ಪ್ರಕರಣದ ತರುವಾಯ, ಈ ಮುಂದಿನ ಹೊಸ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

**"109ಎ. ಪ್ರೋರೇಟಾ ಚಾರ್ಜುಗಳ ಸಂದಾಯದ ವಿಫಲತೆಗೆ ದಂಡ.–** ನಿರ್ಧರಿಸಲಾದ ಪ್ರೋರೇಟಾ ಚಾರ್ಜುಗಳನ್ನು ಸಂದಾಯ ಮಾಡುವುದಕ್ಕೆ ವಿಫಲನಾದ ಪ್ರತಿಯೊಬ್ಬ ಮಾಲೀಕ, ಅಧಿಭೋಗದಾರ ಅಥವಾ ಬಿಲ್ಡರನು, ಮೌಲ್ಯಮಾಪನ ನಿರ್ಧರಿಸಲಾದ ಪ್ರೋರೇಟಾ ಚಾರ್ಜುಗಳಿಗೆ ಹೆಚ್ಚಿಗೆಯಾಗಿ ಮಂಡಳಿಯು ನಿರ್ಧರಿಸಬಹುದಾದ ಪ್ರೋರೇಟಾ ಚಾರ್ಜುಗಳ 25% ರವರೆಗೆ ಜುಲ್ಮಾನೆಯನ್ನು ಸಂದಾಯ ಮಾಡುವುದಕ್ಕೆ ಬದ್ಧನಾಗತಕ್ಕದ್ದು."

**29. 127ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 127ನೇ ಪ್ರಕರಣದ ತರುವಾಯ, ಈ ಮುಂದಿನ ಹೊಸ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

**"127ಎ. ಭೂ ಸ್ವಾಧೀನತೆ.–** (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು ಮತ್ತು ರಾಜ್ಯ ಸರ್ಕಾರದ ಪೂರ್ವಾನುಮತಿಯೊಂದಿಗೆ, ಮಂಡಳಿಯು, ಈ ಅಧಿನಿಯಮದ ಉದ್ದೇಶಕ್ಕಾಗಿ ಅಂಥ ಚರಾಸ್ತಿಯನ್ನು ಅಥವಾ ಅದರಲ್ಲಿನ ಯಾವುದೇ ಹಿತಾಸಕ್ತಿಯನ್ನು ಖರೀದಿಸುವುದಕ್ಕೆ ಮತ್ತು ಅನುಮೋದಿಸಬಹುದಾದಂಥ ಷರತ್ತುಗಳ ಮೇಲೆ ಮತ್ತು ಅಂಥ ಬೆಲೆಗೆ ಬೆಂಗಳೂರು ನಗರಪಾಲಿಕೆಯ ಪ್ರದೇಶದೊಳಗೆ ಅಥವಾ ಹೊರಗೆ ಇರುವ ಯಾವುದೇ ಭೂಮಿಯ ಅಥವಾ ಅದರಲ್ಲಿ ಯಾವುದೇ ಹಿತಾಸಕ್ತಿಯನ್ನುಳ್ಳ ಮಾಲೀಕನೊಂದಿಗೆ ಈ ಅಧಿನಿಯಮದ ಉದ್ದೇಶಕ್ಕಾಗಿ ಅಂಥ ಸ್ಥಿರಸ್ವತ್ತನ್ನು ಅಥವಾ ಅದರಲ್ಲಿಯ ಹಿತಾಸಕ್ತಿಯನ್ನು ಧಾರಣ ಮಾಡತಕ್ಕದ್ದು. ಒಪ್ಪಂದವನ್ನು ಮಾಡಿಕೊಳ್ಳಬಹುದು. ಮತ್ತು

(2) ಭೂ ಸ್ವಾಧೀನ ಅಧಿನಿಯಮ, 1894 ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಅಧಿನಿಯಮದ ಅಡಿಯಲ್ಲಿ ಸ್ವಾಧೀನದ ಅಧಿಕಾರವನ್ನು ಹೊಂದಿರುವ ರಾಜ್ಯ ಸರ್ಕಾರವು, ಮಂಡಳಿಯ ಕೋರಿಕೆಯ ಮೇರೆಗೆ ಯಾವುದೇ ಸ್ಥಿರಾಸ್ತಿಯ ಸ್ವಾಧೀನವನ್ನು ದೊರಕಿಸಿಕೊಡಬಹುದು ಮತ್ತು ಅಂಥ ಸ್ವಾಧೀನವು ಸಾರ್ವಜನಿಕ ಉದ್ದೇಶಕ್ಕಾಗಿ ಆಗಿದೆ ಎಂದು ಭಾವಿಸತಕ್ಕದ್ದು.

(3) ಭೂಸ್ವಾಧೀನ ಅಧಿನಿಯಮ, 1894ರ 50ನೇ ಪ್ರಕರಣದ (2)ನೇ ಉಪಪ್ರಕರಣದ ಉದ್ದೇಶಕ್ಕಾಗಿ ಪ್ರಾಧಿಕಾರವು ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರ ಆಗಿದೆ ಎಂದು ಭಾವಿಸತಕ್ಕದ್ದು.

(4) ಭೂ ಸ್ವಾಧೀನ ಅಧಿನಿಯಮ, 1894ರ 16ನೇ ಪ್ರಕರಣದ ಅಡಿಯಲ್ಲಿ ಭೂಮಿಯು ರಾಜ್ಯ ಸರ್ಕಾರದಲ್ಲಿ ನಿಹಿತವಾದ ತರುವಾಯ, ಜಿಲ್ಲಾಧಿಕಾರಿಯವರು, ಸ್ವಾಧೀನದ ವೆಚ್ಚವನ್ನು ಸಂದಾಯ ಮಾಡಿದ ಮೇಲೆ ಮತ್ತು ಸ್ವಾಧೀನ ನಿಮಿತ್ತ ವಹಿಸಬಹುದಾದ ಯಾವುದೇ ಹೆಚ್ಚಿನ ವೆಚ್ಚವನ್ನು ಸಂದಾಯ ಮಾಡುವುದಕ್ಕೆ ಮಂಡಳಿಯು ಒಪ್ಪಿದ ಮೇಲೆ, ಭೂಮಿಯನ್ನು ಮಂಡಳಿಗೆ ವರ್ಗಾಯಿಸತಕ್ಕದ್ದು ಮತ್ತು ಆ ತರುವಾಯ ಭೂಮಿಯು ಮಂಡಳಿಯಲ್ಲಿ ನಿಹಿತವಾಗತಕ್ಕದ್ದು.

**30. 128ನೇ ಪ್ರಕರಣವನ್ನು ಬಿಟ್ಟುಬಿಡುವುದು.–** ಮೂಲ ಅಧಿನಿಯಮದ 128ನೇ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**31. ಪದಾವಳಿಗಳ ಪ್ರತಿಯೋಜನೆ.–** ಮೂಲ ಅಧಿನಿಯಮದಲ್ಲಿ,–

(i) "ಬೆಂಗಳೂರು ನಗರ" ಎಂಬ ಪದಗಳು, ಬರುವ ಕಡೆಗಳಲ್ಲೆಲ್ಲಾ, "ಬೃಹತ್ ಬೆಂಗಳೂರು ಮಹಾನಗರ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) "ನಿಗಮ" ಎಂಬ ಪದವು ಬರುವ ಕಡೆಗಳಲ್ಲೆಲ್ಲಾ, "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**32. ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ಕ್ಕೆ ತಿದ್ದುಪಡಿ.–** ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14), 110ನೇ ಪ್ರಕರಣದ, (1)ನೇ ಉಪ ಪ್ರಕರಣದಲ್ಲಿ, (ಕೆ) ಖಂಡದಲ್ಲಿ, "ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ" ಎಂಬ ಪದಗಳ ತರುವಾಯ "ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

**33. ಕರ್ನಾಟಕ ಅಂತರ್ಜಲ (ಕುಡಿಯುವ ನೀರಿನ ಮೂಲಗಳ ಸಂರಕ್ಷಣೆಗಾಗಿ ನಿಯಂತ್ರಣ) ಅಧಿನಿಯಮ, 1999.–** ಕರ್ನಾಟಕ ಅಂತರ್ಜಲ (ಕುಡಿಯುವ ನೀರಿನ ಮೂಲಗಳ ಸಂರಕ್ಷಣೆಗಾಗಿ ನಿಯಂತ್ರಣ) ಅಧಿನಿಯಮ, 1999ರಲ್ಲಿ (2003ರ ಕರ್ನಾಟಕ ಅಧಿನಿಯಮ 44), 2ನೇ ಪ್ರಕರಣದ, (1)ನೇ ಖಂಡದಲ್ಲಿ, ಕೊನೆಯಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಬೆಂಗಳೂರು ಬೃಹತ್ ನಗರ ಪ್ರದೇಶದ ಸಂಬಂಧದಲ್ಲಿ, ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಮಂಡಳಿಗೆ ಸೇರಿದ ಅಸಿಸ್ಟೆಂಟ್ ಕಮೀಷನರ್ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿ

ಮತ್ತು ಇತರ ಪೌರನಿಗಮಗಳು, ಮುನಿಸಿಪಲ್ ಕೌನ್ಸಿಲ್‌ಗಳು, ಟೌನ್ ಪಂಚಾಯತ್‌ಗಳು ಮತ್ತು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಮಂಡಳಿಯೊಳಗೆ ಬರುವ ಇತರ ಪ್ರದೇಶಗಳ ಸಂಬಂಧದಲ್ಲಿ, ಕರ್ನಾಟಕ ನಗರ ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಮಂಡಳಿಗೆ ಸೇರಿದ ಅಸಿಸ್ಟೆಂಟ್ ಕಮೀಷನರ್ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿಯನ್ನು ಅಧಿಸೂಚನೆಯ ಮೂಲಕ ರಾಜ್ಯ ಸರ್ಕಾರವು ಯುಕ್ತ ಪ್ರಾಧಿಕಾರವನ್ನಾಗಿ ನೇಮಿಸಬಹುದು.''

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಚೀಫ್ ಇಂಜಿನಿಯರ್ (ನಿವೃತ್ತ) ಅಧ್ಯಕ್ಷತೆಯಲ್ಲಿ ಸ್ಥಾಪಿತವಾದ ಒಂದು ಸಮಿತಿಯು, ಮಂಡಳಿಗೆ ಉಪಯುಕ್ತವಾಗಬಹುದಾದ ಅತ್ಯುತ್ತಮ ಪದ್ಧತಿಗಳನ್ನು ಅಳವಡಿಸಿಕೊಳ್ಳುವ ದೃಷ್ಟಿಯಿಂದ, ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಮಂಡಳಿ ಅಧಿನಿಯಮ, 1964ರ ಉಪಬಂಧಗಳನ್ನು ಮತ್ತು ವಿವಿಧ ನಗರಗಳ ಎಂದರೆ, ಚೆನ್ನೈ, ಹೈದರಾಬಾದ್ ಮತ್ತು ದೆಹಲಿಯ ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಅಧಿನಿಯಮಗಳ ಉಪಬಂಧಗಳನ್ನು ಪರಿಶೀಲಿಸಿ ಕೆಲವು ಶಿಫಾರಸುಗಳನ್ನು ಮಾಡಿತು. ಆ ಶಿಫಾರಸುಗಳನ್ನು ಪರಿಗಣಿಸಿ, ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸುವುದಕ್ಕಾಗಿ ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಅಧಿನಿಯಮ, 1964ಕ್ಕೆ ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ,–

(ಎ) ಅಧಿನಿಯಮದ ಉಪಬಂಧಗಳನ್ನು ಸಮಗ್ರ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಕ್ಕೆ ವಿಸ್ತರಿಸುವುದು;

(ಬಿ) ಮಂಡಳಿಯ ಸದಸ್ಯರುಗಳ ಗರಿಷ್ಠ ಸಂಖ್ಯೆಯನ್ನು ಒಂಬತ್ತಕ್ಕೆ ಹೆಚ್ಚಿಸುವುದು;

(ಸಿ) ಮಳೆನೀರು ಕೊಯ್ಲು ಮತ್ತು ಕುಡಿಯಲು ಬಳಸದಿರುವ ಅಥವಾ ಕುಡಿಯುವ ನೀರಿನ ಉದ್ದೇಶಕ್ಕಾಗಿ ತ್ಯಾಜ್ಯ ಜಲದ ಪುನರ್ ಬಳಕೆಯಂಥ ನೀರು ಸಂರಕ್ಷಣಾ ವಿಧಾನಗಳನ್ನು ಅಳವಡಿಸಿಕೊಳ್ಳಲು ಮಾಲಿಕರು ಅಥವಾ ಅನುಭವದಾರರನ್ನು ಒತ್ತಾಯಿಸಲು ಮಂಡಳಿಗೆ ಅಧಿಕಾರ ನೀಡುವುದು;

(ಡಿ) ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ವಿವಿಧ ಅಪರಾಧಗಳಿಗಾಗಿ ದಂಡಗಳನ್ನು ಹೆಚ್ಚಿಸುವುದು;

(ಇ) ಮಂಡಳಿಯ ಉದ್ದೇಶಗಳಿಗಾಗಿ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುವುದು;

(ಎಫ್) ಕೆಲವು ಪ್ರಾಸಂಗಿಕವಾದ ತಿದ್ದುಪಡಿಗಳನ್ನು ಮಾಡುವುದು;

ಈ ಸಂದರ್ಭದಲ್ಲಿ,–

(i) ಮಂಡಳಿಯ ಕಟ್ಟಡಗಳ ಮೇಲೆ ಆಸ್ತಿ ತೆರಿಗೆಗಳಿಗೆ ವಿನಾಯಿತಿ ನೀಡುವುದಕ್ಕಾಗಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976; ಮತ್ತು

(ii) ಬೆಂಗಳೂರು ಸಂಬಂಧದಲ್ಲಿ, ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಮಂಡಳಿಗೆ ಸೇರಿದ ಸಹಾಯಕ ಕಮೀಷನರ್ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿಯನ್ನು ನೇಮಿಸಲು ಮತ್ತು ಇತರ ಪೌರನಿಗಮಗಳು, ಮುನಿಸಿಪಲ್ ಕೌನ್ಸಿಲ್‌ಗಳಡಿಯಲ್ಲಿ ಬರುವ ಪ್ರದೇಶಗಳ ಸಂಬಂಧದಲ್ಲಿ, ಸದರಿ ಅಧಿನಿಯಮದಡಿಯಲ್ಲಿ ಸಮುಚಿತ ಪ್ರಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಮಂಡಳಿಯ ಒಬ್ಬರು ಅಧಿಕಾರಿಯನ್ನು ನೇಮಿಸುವುದಕ್ಕಾಗಿ ಕರ್ನಾಟಕ ಅಂತರ್ಜಲ (ಕುಡಿಯುವ ನೀರಿನ ಮೂಲಗಳ ಸಂರಕ್ಷಣೆಗಾಗಿ ನಿಯಂತ್ರಣ) ಅಧಿನಿಯಮ, 1999;

– ಇವುಗಳಿಗೆ ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ಯಾವುದೇ ಹೆಚ್ಚಿನ ವೆಚ್ಚ ಉಂಟಾಗುವುದಿಲ್ಲ.

**ಕಟ್ಟಾ ಸುಬ್ರಮಣ್ಯ ನಾಯ್ಡು**
ವಸತಿ, ವಾರ್ತಾ, ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ
ಹಾಗೂ ಬೆಂಗಳೂರು ಜಲಮಂಡಳಿ ಸಚಿವರು

**ಎಸ್.ಬಿ.ಪಾಟೀಲ್**
ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಅಧಿನಿಯಮ, 1964ರ (1964 ಕರ್ನಾಟಕ ಅಧಿನಿಯಮ ಸಂಖ್ಯೆ 36) ಉದ್ಧೃತ ಭಾಗ**

xxx xxx xxx

**2. ಪರಿಭಾಷೆಗಳು.**- ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(1) 'ಬೆಂಗಳೂರು ಮಹಾನಗರ ಪ್ರದೇಶ' ಎಂದರೆ, ಬೆಂಗಳೂರು ನಗರ ಜಿಲ್ಲೆಯ ಪ್ರದೇಶ ಮತ್ತು ಇದು ರಾಜ್ಯಸರ್ಕಾರವು ಕಾಲಕಾಲಕ್ಕೆ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಹೊಂದಿಕೊಂಡಿರುವ ಪ್ರದೇಶಗಳನ್ನು ಒಳಗೊಳ್ಳುತ್ತದೆ;

xxx xxx xxx

(3) 'ಕಟ್ಟಡ' ಎಂದರೆ ಮನೆ, ಔಟ್ ಹೌಸ್, ಲಾಯ, ಕಕ್ಕಸು, ಮೂತ್ರಿಗಳು, ಶೆಡ್ಡು, ಗುಡಿಸಲು ಅಥವಾ ಕಲ್ಲು, ಇಟ್ಟಿಗೆ, ಮರ, ಮಣ್ಣು, ಲೋಹ ಅಥವಾ ಇತರ ಸಾಮಗ್ರಿಯಿಂದ ನಿರ್ಮಿಸಿದ ಯಾವುದೇ ಇತರ ರಚನೆ. ಆದರೆ ಇದು ಸಾಗಿಸಬಹುದಾದ ಯಾವುದೇ ಇತರ ಆಶ್ರಯವನ್ನು ಒಳಗೊಳ್ಳುವುದಿಲ್ಲ;

xxx xxx xxx

(5) 'ಬೆಂಗಳೂರು ನಗರ' ಎಂದರೆ ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949 (ಮೈಸೂರು ಅಧಿನಿಯಮ 1949ರ ಸಂಖ್ಯೆ 69) ರಲ್ಲಿ ಪರಿಭಾಷಿಸಿರುವಂತೆ ಬೆಂಗಳೂರು ನಗರ;

xxx xxx xxx

(7) 'ನಿಗಮ' ಎಂದರೆ ಬೆಂಗಳೂರು ನಗರದ ಪೌರನಿಗಮ;

xxx xxx xxx

**3. ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥಾ ಮಂಡಳಿಯ ರಚನೆ ಮತ್ತು ಸಂಯೋಜನೆ.**- (1)

xxx xxx xxx

(2) ಆ ಮಂಡಳಿಯು, ರಾಜ್ಯ ಸರ್ಕಾರವು ನೇಮಕ ಮಾಡಿದ ಮೂವರಿಗಿಂತ ಕಡಿಮೆಯಿಲ್ಲದ ಮತ್ತು ಏಳಕ್ಕಿಂತ ಹೆಚ್ಚಿಲ್ಲದ ಸದಸ್ಯರನ್ನು ಒಳಗೊಂಡಿರತಕ್ಕದ್ದು.

(3) ಆ ಸದಸ್ಯರಲ್ಲಿ -

(ಎ) ಒಬ್ಬನು, ವಾಣಿಜ್ಯ ವಿಷಯಗಳು ಮತ್ತು ಆಡಳಿತದಲ್ಲಿ ಅನುಭವವನ್ನು ಹೊಂದಿರುವ ಮತ್ತು ಸಾಮರ್ಥ್ಯವುಳ್ಳ ವ್ಯಕ್ತಿಯಾಗಿರತಕ್ಕದ್ದು;

(ಬಿ) ಒಬ್ಬನು, ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಗಳಲ್ಲಿ ಅದರಲ್ಲಿಯೂ ನೀರು ಸರಬರಾಜು, ಚರಂಡಿ ಮತ್ತು ಗ್ರಾಮಸಾರ ವಿಲೆ ಮತ್ತು ಕೈಗಾರಿಕಾ ಕಸಗಳಿಗೆ ಸಂಬಂಧಪಟ್ಟಂತೆ ಸಾರ್ವಜನಿಕ ಆರೋಗ್ಯ ಇಂಜಿನಿಯರಿಂಗ್ ಕ್ಷೇತ್ರದಲ್ಲಿ ವ್ಯಾಪಕ ಅನುಭವವನ್ನು ಹೊಂದಿರುವ ವ್ಯಕ್ತಿಯಾಗಿರತಕ್ಕದ್ದು;][1] ಮತ್ತು

xxx xxx xxx

(5) ವ್ಯಕ್ತಿಯು, ಅವನು ಸಂಸತ್ತಿನ ಅಥವಾ ಯಾವುದೇ ರಾಜ್ಯ ವಿಧಾನಮಂಡಲದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದ ಸದಸ್ಯನಾಗಿದ್ದರೆ ಅಥವಾ ನಿಕಟ ಪೂರ್ವದ ಹನ್ನೆರಡು ತಿಂಗಳುಗಳ ಒಳಗೆ ಹಾಗೆ ಇದ್ದಿದ್ದರೆ ಮಂಡಳಿಯ ಸದಸ್ಯನಾಗಿ ನೇಮಕಗೊಳ್ಳುವುದಕ್ಕೆ ಅಥವಾ ಸದಸ್ಯನಾಗಿರಲು ಅನರ್ಹನಾಗಿರತಕ್ಕದ್ದು.

xxx xxx xxx

**12. ಸಿಬ್ಬಂದಿಯ ನೇಮಕಾತಿ.**- ಮಂಡಳಿಯು, ಒಬ್ಬ ಕಾರ್ಯದರ್ಶಿ, ಒಬ್ಬ ಮುಖ್ಯ ಇಂಜಿನಿಯರ್, ಒಬ್ಬ ಸ್ಯಾನಿಟರಿ ಇಂಜಿನಿಯರ್, ಒಬ್ಬ ನೀರು ಸರಬರಾಜು ಇಂಜಿನಿಯರ್ ಮತ್ತು ಈ ಅಧಿನಿಯಮದ ಮೇರೆಗೆ ಅದರ ಪ್ರಕಾರ್ಯಗಳನ್ನು ನಿರ್ವಹಿಸಲು ಮಂಡಳಿಗೆ ಸಾಧ್ಯವಾಗುವಂತೆ ಅಗತ್ಯವಾಗಬಹುದಾದಂಥ ಇತರ ಅಧಿಕಾರಿಗಳು ಮತ್ತು ನೌಕರರನ್ನು ನೇಮಕ ಮಾಡಬಹುದು:

ಪರಂತು, ಕಾರ್ಯದರ್ಶಿ, ಮುಖ್ಯ ಇಂಜಿನಿಯರ್, ಸ್ಯಾನಿಟರಿ ಇಂಜಿನಿಯರ್ ಮತ್ತು ನೀರು ಸರಬರಾಜು ಇಂಜಿನಿಯರ್ ಇವರ ನೇಮಕಾತಿಯನ್ನು ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿದ ತರುವಾಯ ಮಾಡತಕ್ಕದ್ದು.

xxx xxx xxx

**15. ಮಂಡಳಿಯ ಸಾಮಾನ್ಯ ಕರ್ತವ್ಯಗಳು.**- (1) xxx xxx xxx

(5) (1), (2) ಮತ್ತು (3)ನೇ ಉಪಪ್ರಕರಣಗಳ ಉಪಬಂಧಗಳಿಗೆ ಬಾಧಕವಾಗದಂತೆ ಮಂಡಳಿಯು, ಯುಕ್ತವಾಗಿ ಕಾರ್ಯಸಾಧ್ಯವಾಗುವಷ್ಟರ ಮಟ್ಟಿಗೆ ಗೃಹ ಬಳಕೆಯ ಉದ್ದೇಶಗಳಿಗಾಗಿ ಪ್ರತಿಯೊಂದು ಮನೆಗೆ ಸಾಕಷ್ಟು ಆರೋಗ್ಯಕರವಾದ ನೀರಿನ ಸರಬರಾಜು ಆಗುವುದನ್ನು ಸುನಿಶ್ಚಿತಗೊಳಿಸುವ ಉದ್ದೇಶಕ್ಕಾಗಿ, ಮನೆಗಳ ಒಡೆಯರನ್ನು, ಅವುಗಳಿಗೆ ನೀರಿನ ಸರಬರಾಜನ್ನು ಒದಗಿಸಲು ಅಗತ್ಯಪಡಿಸಿ ಈ ಅಧಿನಿಯಮದ ಮೇರೆಗಿನ ಅದರ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

xxx xxx xxx

**16. ಮಂಡಳಿಯ ಹಣಕಾಸಿನ ಸಾಮಾನ್ಯ ತತ್ವಗಳು.-** (1) ಈ ಅಧಿನಿಯಮದ ಮೇರೆಗಿನ ಅದರ ಕಾರ್ಯಾಚರಣೆಗಳನ್ನು ನಡೆಸುವುದಕ್ಕಾಗಿ ಮಂಡಳಿಯು ದರಗಳು, ಫೀಜುಗಳು, ಬಾಡಿಗೆ ಮೊತ್ತಗಳು ಮತ್ತು ಇತರ ವೆಚ್ಚಗಳನ್ನು ವಿಧಿಸತಕ್ಕದ್ದು, ಮತ್ತು -

(ಎ) ಕಾರ್ಯಾಚರಣಾ ವೆಚ್ಚಗಳು, ತೆರಿಗೆಗಳು ಮತ್ತು ಬಡ್ಡಿ ಸಂದಾಯಗಳನ್ನು ಭರಿಸಲು ಮತ್ತು ಸಾಕಷ್ಟು ನಿರ್ವಹಣೆ ಮತ್ತು ಇಳಿತಾಯಗಳಿಗಾಗಿ ವ್ಯವಸ್ಥೆ ಮಾಡಲು;

(ಬಿ) ಸಾಲಗಳು ಮತ್ತು ಇತರ ಕಡಗಳ ಮರುಸಂದಾಯಗಳನ್ನು ಭರಿಸಲು;

(ಸಿ) ವರ್ಷದಿಂದ ವರ್ಷಕ್ಕೆ ಆಗುವ ಸಾಮಾನ್ಯ ಅಭಿವೃದ್ಧಿಗಳಿಗಾಗಿ ಹಣಕಾಸು ಒದಗಿಸಲು; ಮತ್ತು

(ಡಿ) ಮಂಡಳಿಯು ನಿರ್ಧರಿಸಬಹುದಾದಂತೆ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ನೀರು ಸರಬರಾಜು ಮತ್ತು ಗ್ರಾಮಸಾರದ ವಿಲೆ ಮಾಡಲು ಅಂಥ ಇತರ ಪ್ರಯೋಜನಕಾರಿ ಉದ್ದೇಶಗಳಿಗಾಗಿ ವ್ಯವಸ್ಥೆಯನ್ನು ಮಾಡಲು, ಸಾಕಷ್ಟು ಹುಟ್ಟುವಳಿಯನ್ನು ಒದಗಿಸುವ ದೃಷ್ಟಿಯಿಂದ ಕಾಲಕಾಲಕ್ಕೆ ಅಂಥ ದರಗಳು, ಫೀಜುಗಳು, ಬಾಡಿಗೆ ಮೊತ್ತಗಳು ಮತ್ತು ಇತರ ವೆಚ್ಚಗಳನ್ನು ಮಾರ್ಪಡಿಸತಕ್ಕದ್ದು.

xxx xxx xxx

**21. ಸಾಲ ತೆಗೆದುಕೊಳ್ಳಲು ಮಂಡಳಿಯ ಅಧಿಕಾರ.-** (1) ಮಂಡಳಿಯು, ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಈ ಬಗ್ಗೆ ನಿಯಮಗಳ ಮೂಲಕ ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಕಾಲಕಾಲಕ್ಕೆ ಈ ಅಧಿನಿಯಮದ ಉದ್ದೇಶಗಳಿಗಾಗಿ ಅಗತ್ಯವಾದ ಯಾವುದೇ ಮೊತ್ತವನ್ನು ಸಾಲವಾಗಿ ಪಡೆದುಕೊಳ್ಳಬಹುದು.

xxx xxx xxx

**29. ನೀರಿನ ಪ್ರಧಾನಕೊಳವೆಗಳ ಮೇಲೆ ಕಟ್ಟಡವನ್ನು ಕಟ್ಟುವ ಬಗ್ಗೆ ನಿಷೇಧ.-** (1) ಮಂಡಳಿಯ ಅಥವಾ ನೀರು ಸರಬರಾಜು ಇಂಜಿನಿಯರನ ಅನುಮತಿಯಿಲ್ಲದೆ, ಮಂಡಳಿಯ ಯಾವುದೇ ನೀರಿನ ಪ್ರಧಾನ ಕೊಳವೆಯ ಮೇಲೆ ಯಾವುದೇ ಕಟ್ಟಡ, ಗೋಡೆ ಅಥವಾ ಇತರ ರಚನೆಯನ್ನು ಹೊಸದಾಗಿ ಕಟ್ಟತಕ್ಕುದಲ್ಲ ಮತ್ತು ಯಾವುದೇ ಬೀದಿಯನ್ನು ರಚಿಸತಕ್ಕದ್ದಲ್ಲ.

xxx xxx xxx

**31. ಸರಬರಾಜು ಮಾಡಿದ ನೀರಿಗಾಗಿ ಮಾಡಬೇಕಾದ ಸಂದಾಯ.-** 27ನೇ ಪ್ರಕರಣ ಅಥವಾ ಯಾವುದೇ ಕಾನೂನು, ಕರಾರು ಅಥವಾ ಇತರ ಲಿಖಿತದಲ್ಲಿ ಏನೇ ಅಡಕವಾಗಿದ್ದಾಗ್ಯೂ, ಈ ಅಧಿನಿಯಮದ ಮೇರೆಗೆ ಸರಬರಾಜು ಮಾಡಿದ ಎಲ್ಲಾ ನೀರಿಗಾಗಿ, ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ದರಗಳಲ್ಲಿ ಅಂಥ ಕಾಲಗಳಲ್ಲಿ ಮತ್ತು ಅಂಥ ಷರತ್ತುಗಳ ಮೇರೆಗೆ ಸಂದಾಯವನ್ನು ಮಾಡತಕ್ಕದ್ದು ಮತ್ತು ವಿವಿಧ ಉದ್ದೇಶಗಳಿಗಾಗಿನ ನೀರಿನ ಸರಬರಾಜಿಗಾಗಿ ಬೇರೆ ಬೇರೆ ದರಗಳನ್ನು ನಿಯಮಿಸಬಹುದು:

ಪರಂತು, ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949ರ 149ಎ ಪ್ರಕರಣದ ಮೇರೆಗೆ ನಿಗಮದೊಡನೆ ವ್ಯವಸ್ಥೆಯನ್ನು ಮಾಡಿಕೊಂಡಿರುವಲ್ಲಿ, ನೀರನ್ನು ನಗರದ ನಿವಾಸಿಗಳಿಗೆ ಅಂಥ ವ್ಯವಸ್ಥೆಗೆ ಅನುಸಾರವಾಗಿ ಮಂಡಲಿಯು ಸರಬರಾಜು ಮಾಡತಕ್ಕುದು.

**32. ಗೃಹ ಬಳಕೆಗಾಗಿ ಖಾಸಗಿ ನೀರು ಸರಬರಾಜು.-** (1) xxx xxx xxx

(3) ಯಾವುದೇ ಭೂಮಿಯ ಮೇಲೆ ಎರಡು ಅಥವಾ ಅದಕ್ಕಿಂತ ಹೆಚ್ಚು ಮೇಲ್ ರಚನೆಗಳಿರುವಲ್ಲಿ ಮತ್ತು ಆ ಭೂಮಿಯ ಒಡೆಯನು ಆ ಎಲ್ಲಾ ಮೇಲ್ ರಚನೆಗಳ ಒಡೆಯನಾಗಿಲ್ಲದೆ ಇರುವಲ್ಲಿ ಮಂಡಳಿಯು, ಗೃಹ ಬಳಕೆ ಮತ್ತು ಉಪಯೋಗಕ್ಕಾಗಿ ಆ ಮೇಲ್ ರಚನೆಗಳಿಗೆ ಸರಿಯಾದ ನೀರು ಸರಬರಾಜು ಇಲ್ಲವೆಂದು ಮತ್ತು ಅಂಥ ಯಾವುದೇ ಮೇಲ್ ರಚನೆಯ ಯಾವುದೇ ಭಾಗದಿಂದ ಮೂವತ್ತೈದು ಮೀಟರ್‌ಗಳಿಗಿಂತ ಹೆಚ್ಚಿಲ್ಲದ ಅಂತರದಲ್ಲಿರುವ ಪ್ರಧಾನ ಕೊಳವೆಯಿಂದ ಅಂಥ ಸರಬರಾಜನ್ನು ಒದಗಿಸಬಹುದೆಂದು ಅದಕ್ಕೆ ಕಂಡುಬಂದರೆ ಅಂಥ ಸರಬರಾಜನ್ನು ಪಡೆದುಕೊಳ್ಳಲು ಆ ಭೂಮಿಯ ಒಡೆಯನನ್ನು ನೋಟೀಸಿನ ಮೂಲಕ ಅಗತ್ಯಪಡಿಸಬಹುದು.

**33. ಗೃಹಬಳಕೆ ಉದ್ದೇಶಕ್ಕಾಗಿರುವ ನೀರಿನ ಸರಬರಾಜು ಕೆಲವು ನಿರ್ದಿಷ್ಟ ಉದ್ದೇಶಗಳಿಗಾಗಿ ಯಾವುದೇ ಸರಬರಾಜನ್ನು ಒಳಗೊಳ್ಳತಕ್ಕದ್ದಲ್ಲ.**- ಈ ಅಧಿನಿಯಮದ ಮೇರೆಗಿನ ಗೃಹಬಳಕೆಯ ಉದ್ದೇಶಗಳಿಗಾಗಿನ ನೀರಿನ ಸರಬರಾಜು,-

(ಎ) ಯಾವುದೇ ವ್ಯಾಪಾರ, ತಯಾರಿಕೆ ಅಥವಾ ವ್ಯವಹಾರಗಳಿಗಾಗಿನ;

xxx xxx xxx

**39. ಪ್ರಧಾನ ಕೊಳವೆಗಳನ್ನು ಹಾಕಲು ಅಧಿಕಾರ.**- (1) ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949 ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಅಡಕವಾಗಿದ್ದಾಗ್ಯೂ, ಮಂಡಳಿಯು, ಬೆಂಗಳೂರು ಮಹಾನಗರದ ಪ್ರದೇಶದ ಸ್ಥಳೀಯ ಪರಿಮಿತಿಗಳೊಳಗಾಗಲಿ ಅಥವಾ ಅದರ ಹೊರಗಡೆಯಾಗಲಿ,-

(ಎ) ಸರ್ಕಾರ, ನಿಗಮ ಅಥವಾ ಯಾವುದೇ ಇತರ ಸ್ಥಳೀಯ ಪ್ರಾಧಿಕಾರ ಅಥವಾ ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ ಯಾವುದೇ ನಿಗಮದಲ್ಲಿ ನಿಹಿತವಾಗಿರುವ ಯಾವುದೇ ಬೀದಿ ಅಥವಾ ಯಾವುದೇ ಭೂಮಿಯಲ್ಲಿ;

(ಬಿ) ಆ ಭೂಮಿಯ ಮೇಲೆ ಅಥವಾ ಅದರಲ್ಲಿ ಬೀದಿಯ ಒಂದು ಭಾಗವಾಗಿರದ ಯಾವುದೇ ಭೂಮಿಯ ಪ್ರತಿಯೊಬ್ಬ ಒಡೆಯ ಮತ್ತು ಅಧಿಭೋಗದಾರನ ಸಮ್ಮತಿಯೊಂದಿಗೆ ಪ್ರಧಾನ ಕೊಳವೆಯನ್ನು ಹಾಕಬಹುದು ಮತ್ತು ಈ ಪ್ರಕರಣದ ಕಾರಣದಿಂದಾಗಿ ಅಥವಾ ಇತರ ಅನ್ಯಥಾ ಹಾಗೆ ಹಾಕಿದ ಯಾವುದೇ ಪ್ರಧಾನ ಕೊಳವೆಯನ್ನು ಕಾಲಕಾಲಕ್ಕೆ ಪರಿಶೀಲಿಸಬಹುದು, ದುರಸ್ತಿಮಾಡಬಹುದು, ಬದಲಾಯಿಸಬಹುದು ಅಥವಾ ನವೀಕರಿಸಬಹುದು ಅಥವಾ ಯಾವುದೇ ಕಾಲದಲ್ಲಿ ಅದನ್ನು ತೆಗೆದುಹಾಕಬಹುದು:

ಪರಂತು, ಈ ಉಪಪ್ರಕರಣದ ಉದ್ದೇಶಕ್ಕಾಗಿ ಅಗತ್ಯವಾದ ಸಮ್ಮತಿಯನ್ನು ತಡೆಹಿಡಿದಿರುವಲ್ಲಿ, ಮಂಡಳಿಯು, ಹಾಗೆ ಮಾಡುವ ಅದರ ಉದ್ದೇಶದ ಬಗ್ಗೆ ಭೂಮಿಯ ಒಡೆಯ ಅಥವಾ ಅಧಿಭೋಗದಾರನಿಗೆ ಬರಹದಲ್ಲಿನ ನೋಟೀಸನ್ನು ಕೊಟ್ಟ ತರುವಾಯ ಅಂಥ ಸಮ್ಮತಿ ಇಲ್ಲದೆಯೇ ಸಹ ಆ ಭೂಮಿಯ ಒಳಗೆ, ಮೇಲ್ಗಡೆ ಅಥವಾ ಮೇಲೆ ಪ್ರಧಾನ ಕೊಳವೆಯನ್ನು ಹಾಕಬಹುದು.

xxx xxx xxx

**53. ನೀರು ಸರಬರಾಜನ್ನು ನಿಲ್ಲಿಸುವ ಅಧಿಕಾರ.**- (1) ಮಂಡಳಿಯು ಯಾವುದೇ ಆವರಣಗಳಿಗೆ ನೀರಿನ ಸರಬರಾಜನ್ನು,-

xxx xxx xxx

(ಹೆಚ್) ಒಡೆಯ ಅಥವಾ ಅಧಿಭೋಗದಾರನು ಈ ಅಧಿನಿಯಮದ ಉಪಬಂಧಗಳು ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳು ಅಥವಾ ವಿನಿಯಮಗಳನ್ನು ಉಲ್ಲಂಘಿಸಿ ಮಂಡಳಿಯ ನೀರು ಸರಬರಾಜಿಗೆ ಸಂಬಂಧಪಟ್ಟ ಕೊಳವೆಗಳು, ಕೊಳಾಯಿಗಳು, ಕಾಮಗಾರಿಗಳು ಅಥವಾ ಜೋಡಣೆಗಳನ್ನು ನೆಲೆಗೊಳಿಸುವಂತೆ, ತೆಗೆದುಹಾಕುವಂತೆ, ದುರಸ್ತಿ ಮಾಡುವಂತೆ ಮಾಡಿದರೆ ಅಥವಾ ಅನ್ಯಥಾ ಹಸ್ತಕ್ಷೇಪ ಮಾಡಿದರೆ ನಿಲ್ಲಿಸಬಹುದು:

ಪರಂತು, ಮಂಡಳಿಯು ಆವರಣದ ಒಡೆಯ ಅಥವಾ ಅಧಿಭೋಗದಾರನಿಗೆ ಮೂರು ದಿವಸಗಳಿಗಿಂತ ಕಡಿಮೆಯಿಲ್ಲದ ನೋಟೀಸನ್ನು ಕೊಟ್ಟಿದ್ದ ಹೊರತು ನೀರು ಸರಬರಾಜನ್ನು ನಿಲ್ಲಿಸತಕ್ಕದ್ದಲ್ಲ.

xxx xxx xxx

**61. ನೀರು ಸರಬರಾಜಿಗೆ ಸಂಬಂಧಿಸಿದಂತೆ ವಿನಿಯಮಗಳು.- (1)** xxx xxx xxx

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಉಪಬಂಧದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಅಂಥ ವಿನಿಯಮಗಳು,-

(ಎ) (i) ಗೃಹ ಉಪಯೋಗಕ್ಕಾಗಿಯೇ ಆಗಲಿ ಅಥವಾ ಅಲ್ಲದಿರಲಿ ಅಥವಾ ಉಚಿತ ಉಪಯೋಗಕ್ಕಾಗಿ ನೀರಿನ ಸರಬರಾಜನ್ನು ನಿಲ್ಲಿಸಲು; ಮತ್ತು

(ii) ವ್ಯವಹಾರದ ಉದ್ದೇಶಕ್ಕಾಗಿ ನೀರಿನ ಮಾರಾಟ ಮತ್ತು ಉಪಯೋಗವನ್ನು ನಿಷೇಧಿಸಲು ಮಂಡಲಿಯ ಅಧಿಕಾರ;

xxx xxx xxx

(3) ಈ ಪ್ರಕರಣದ ಮೇರೆಗೆ ಯಾವುದೇ ವಿನಿಯಮವನ್ನು ರಚಿಸುವಲ್ಲಿ ಮಂಡಲಿಯು, ಅದರ ಉಲ್ಲಂಘನೆಯು ಒಂದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಮತ್ತು ಉಲ್ಲಂಘನೆಯು ಮುಂದುವರಿಯುತ್ತಿರುವ ಸಂದರ್ಭದಲ್ಲಿ, ಅಂಥ ಉಲ್ಲಂಘನೆಯನ್ನು ಮುಂದುವರಿಸದಿರಲು ಮಂಡಲಿಯಿಂದ

ನೋಟೀಸನ್ನು ಸ್ವೀಕರಿಸಿದ ತರುವಾಯ, ಉಲ್ಲಂಘನೆಯು ಮುಂದುವರಿಯುತ್ತಿರುವಂಥ ಅವಧಿಯಲ್ಲಿ ಪ್ರತಿಯೊಂದು ದಿವಸಕ್ಕಾಗಿ ಹತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ ದಂಡನೀಯವಾಗತಕ್ಕದೆಂದು ಉಪಬಂಧಿಸಬಹುದು.

xxx xxx xxx

**62. ಕೆಲವು ಅಪರಾಧಗಳಿಗಾಗಿ ದಂಡನೆ.**- ಯಾರೇ ಆಗಲಿ,-

(ಎ) ಈ ಕೆಳಕಂಡ ಕೋಷ್ಟಕದ ಮೊದಲನೇ ಅಂಕಣದಲ್ಲಿ ನಮೂದುಮಾಡಿದ ಈ ಅಧಿನಿಯಮದ ಯಾವುದೇ ಉಪಬಂಧವನ್ನು ಉಲ್ಲಂಘಿಸಿದರೆ; ಅಥವಾ

(ಬಿ) ಸದರಿ ಯಾವುದೇ ಉಪಬಂಧದ ಮೇರೆಗೆ ಅವನಿಗೆ ಕಾನೂನು ಸಮ್ಮತವಾಗಿ ಕೊಟ್ಟ ಯಾವುದೇ ಆದೇಶ ಅಥವಾ ನಿರ್ದೇಶನವನ್ನು ಅಥವಾ ಅವನಿಗೆ ಕಾನೂನು ಸಮ್ಮತವಾಗಿ ಮಾಡಿಕೊಂಡ ಯಾವುದೇ ಕಡ್ಡಾಯ ಕೋರಿಕೆಯನ್ನು ಪಾಲಿಸಲು ತಪ್ಪಿದರೆ ಅವನು,-

(i) ಸದರಿ ಕೋಷ್ಟಕದ ಮೂರನೇ ಅಂಕಣದಲ್ಲಿ ಅದರ ಬಗ್ಗೆ ನಿರ್ದಿಷ್ಟಪಡಿಸಿದ ಮೊಬಲಗಿಗೆ ವಿಸ್ತರಿಸಬಹುದಂಥ ಜುಲ್ಮಾನೆಯಿಂದ; ಮತ್ತು

(ii) ಮುಂದುವರಿಯುತ್ತಿರುವ ಉಲ್ಲಂಘನೆ ಅಥವಾ ತಪ್ಪುವಿಕೆಯ ಸಂದರ್ಭದಲ್ಲಿ ಅಂಥ ಮೊದಲನೇ ಉಲ್ಲಂಘನೆ ಅಥವಾ ತಪ್ಪುವಿಕೆಗಾಗಿ ಅಪರಾಧವು ನಿರ್ಣಯವಾದ ತರುವಾಯ, ಅಂಥ ಉಲ್ಲಂಘನೆ ಅಥವಾ ತಪ್ಪುವಿಕೆಯು ಮುಂದುವರಿಯುತ್ತಿರುವಂಥ ಕಾಲದಲ್ಲಿ ಪ್ರತಿಯೊಂದು ದಿವಸಕ್ಕಾಗಿ ಆ ಕೋಷ್ಟಕದ ನಾಲ್ಕನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಮೊಬಲಗಿಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

**ಕೋಷ್ಟಕ**

| **ಅಧಿನಿಯಮದ ಉಪಬಂಧಗಳು** | **ವಿಷಯ** | **ವಿಧಿಸಬಹುದಾದಂಥ ಗರಿಷ್ಠ ಜುಲ್ಮಾನೆ (ರೂಪಾಯಿಗಳಲ್ಲಿ)** | **ವಿಧಿಸಬಹುದಾದಂಥ ನಿತ್ಯದ ಜುಲ್ಮಾನೆ (ರೂಪಾಯಿಗಳಲ್ಲಿ)** |
|---|---|---|---|
| 1 | 2 | 3 | 4 |
| ಪ್ರಕರಣ 28 | ನೀರು ಸರಬರಾಜನ್ನು ಜೋಡಿಸಿರುವ ಆವರಣದ ಮೇಲೆ ಅತಿಕ್ರಮಣ ಮಾಡುವುದು | 50 | – |
| ಪ್ರಕರಣ 30 | ವಿನಿಯಮಗಳಿಗೆ ಅನುಗುಣವಾಗಿ ಮನೆ ಜೋಡಣೆಗಳನ್ನು ಇಟ್ಟುಕೊಂಡು ಬರುವುದಕ್ಕೆ ತಪ್ಪುವುದು | 50 | – |
| ಪ್ರಕರಣ 32 ಉಪಪ್ರಕರಣ (2) | ಸರಿಯಾದ ನೀರು ಸರಬರಾಜು ಇಲ್ಲದ ಮನೆಯನ್ನು ಅಧಿಭೋಗಿಸುವುದು ಅಥವಾ ಅಧಿಭೋಗಕ್ಕೆ ಅವಕಾಶ ಮಾಡಿಕೊಡುವುದು | 50 | – |
| ಪ್ರಕರಣ 32 ಉಪಪ್ರಕರಣ (3) | ಮನೆ ಜೋಡಣೆಗಳನ್ನು ಮಾಡುವ ಬಗ್ಗೆ ಕಡ್ಡಾಯ ಕೋರಿಕೆಯನ್ನು ಪಾಲಿಸಲು ತಪ್ಪುವುದು | 50 | 5 |
| ಪ್ರಕರಣ 34 | ಗೃಹಕೃತ್ಯದ ಉದ್ದೇಶಗಳಿಗಾಗಿ ಸರಬರಾಜು ಮಾಡಿದ ನೀರನ್ನು ಗೃಹೇತರ ಉದ್ದೇಶಗಳಿಗಾಗಿ ಉಪಯೋಗಿಸುವುದು | 100 | 5 |
| ಪ್ರಕರಣ 49 | ನೀರಿನ ಪೋಲು ಅಥವಾ ಅದರ ದುರುಪಯೋಗ | 50 | – |
| ಪ್ರಕರಣ 50 | ಪ್ರವೇಶ ಇತ್ಯಾದಿಗಳ ನಿರಾಕರಣೆ | 100 | – |
| ಪ್ರಕರಣ 52 ಉಪಪ್ರಕರಣ (1) | ನೀರಿನ ಕೊಳವೆಗಳ ಇತ್ಯಾದಿಗಳನ್ನು ಅವುಗಳಿಗೆ ಹಾನಿಯಾಗುವ ಅಥವಾ ಅದರಲ್ಲಿ ನೀರು ಮಲಿನವಾಗುವ ಸ್ಥಾನದಲ್ಲಿ ಹಾಕುವುದು | 100 | 5 |
| ಪ್ರಕರಣ 52 ಉಪಪ್ರಕರಣ (2) | ಕೊಳವೆಗಳು ಹಾನಿಗೊಳ್ಳಬಹುದಾದ ಅಥವಾ ಅದರಲ್ಲಿನ ನೀರು ಮಲಿನಗೊಳ್ಳುವ ಸ್ಥಾನದಲ್ಲಿ ಶೌಚಾಲಯಗಳು ಇತ್ಯಾದಿಗಳನ್ನು ನಿರ್ಮಿಸುವುದು | – | 100 |

| | | | |
|---|---|---|---|
| ಪ್ರಕರಣ 59 ಉಪಪ್ರಕರಣ (1) | ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಯಾವನೇ ಇತರ ವ್ಯಕ್ತಿಯಿಂದ ಕಾಮಗಾರಿಯ ನಿರ್ವಹಣೆ | 200 | – |
| ಪ್ರಕರಣ 59 ಉಪಪ್ರಕರಣ (2) | ಅಗತ್ಯಪಡಿಸಿದಾಗ ನಿಯೋಜಿಸಿಕೊಂಡ ಲೈಸೆನ್ಸು ಪಡೆದ ಕೊಳಾಯಿಗಾರನ ಹೆಸರನ್ನು ಒದಗಿಸಲು ತಪ್ಪುವುದು | 100 | – |
| ಪ್ರಕರಣ 59 ಉಪಪ್ರಕರಣ (6) | ಲೈಸೆನ್ಸ್ ಪಡೆದ ಕೊಳಾಯಿಗಾರನು ನಿಯಮಿಸಿದ ಚಾರ್ಜುಗಳಿಗಿಂತ ಹೆಚ್ಚಿನದನ್ನು ತಗಾದೆ ಮಾಡಕೂಡದು | 100 | – |
| ಪ್ರಕರಣ 59 ಉಪಪ್ರಕರಣ (8) | ಲೈಸೆನ್ಸ್ ಪಡೆದ ಕೊಳಾಯಿಗಾರನು ವಿನಿಯಮಗಳನ್ನು ಉಲ್ಲಂಘಿಸಬಾರದು ಅಥವಾ ಅಜಾಗರೂಕತೆಯಿಂದ ಅಥವಾ ನಿರ್ಲಕ್ಷ್ಯೆಯಿಂದ ಕಾಮಗಾರಿಯನ್ನು ನಿರ್ವಹಿಸಬಾರದು | 100 | – |
| ಪ್ರಕರಣ 60ರ ಉಪಪ್ರಕರಣ ಎ, ಬಿ, ಡಿ ಮತ್ತು ಇ | ನೀರು ಸರಬರಾಜು ಗೃಹಕ್ಕೆ ಸಂಬಂಧಪಟ್ಟಂತೆ ಉದ್ದೇಶಪೂರ್ವಕ ಅಥವಾ ನಿರ್ಲಕ್ಷ್ಯತೆಯ ಕಾರ್ಯಗಳ ಬಗ್ಗೆ ನಿಷೇಧ | 100 | – |

xxx xxx xxx

**66. ಮಂಡಳಿಯ ಗ್ರಾಮಸಾರ ಚರಂಡಿಗೆ ಹರಿಸಲು ಒಡೆಯರು ಮತ್ತು ಅಧಿಭೋಗದಾರರಿಂದ ಅರ್ಜಿ.–** (1) xxx xxx xxx

(3) ಮಂಡಳಿಯು, ಅದು ಸೂಕ್ತವೆಂದು ಯೋಚಿಸಿದರೆ, ಸಾರ್ವಜನಿಕ ಬೀದಿಯಲ್ಲಿ ಅಥವಾ ಅದರ ಕೆಳಗೆ ಇರುವಂಥ ಮಂಡಳಿಯ ಗ್ರಾಮಸಾರ ಚರಂಡಿಯೊಂದಿಗೆ ಖಾಸಗಿ ಚರಂಡಿಯನ್ನು ಕೂಡಿಸುವುದಕ್ಕಾಗಿ ಅವಶ್ಯವಾದ ಕಾಮಗಾರಿಯ ಅಂಥ ಭಾಗವನ್ನು ನಿರ್ಮಿಸಬಹುದು ಮತ್ತು ಅಂಥ ಸಂದರ್ಭದಲ್ಲಿ ಮಂಡಲಿಯು ವಹಿಸಿದ ವೆಚ್ಚಗಳನ್ನು ಆ ಆವರಣದ ಒಡೆಯ ಅಥವಾ ಅಧಿಭೋಗದಾರನು ಅಥವಾ ಸಂದರ್ಭಾನುಸಾರ ಆ ಖಾಸಗಿ ಚರಂಡಿಯ ಒಡೆಯನು ಸಂದಾಯ ಮಾಡತಕ್ಕದ್ದು ಮತ್ತು ಅವುಗಳನ್ನು ಒಡೆಯ ಅಥವಾ ಅಧಿಭೋಗದಾರನಿಂದ ಈ ಅಧಿನಿಯಮದ ಮೇರೆಗೆ ಸಂದಾಯಮಾಡಬೇಕಾದ ಚಾರ್ಜುಗಳ ಬಾಕಿಯಂತೆ ವಸೂಲು ಮಾಡತಕ್ಕದ್ದು.

xxx xxx xxx

**72. ಗ್ರಾಮಸಾರ ಚರಂಡಿ ವ್ಯವಸ್ಥೆ ಮತ್ತು ಮಳೆಯ ನೀರಿನ ಚರಂಡಿಗಳು ವಿಭಿನ್ನವಾಗಿರತಕ್ಕದ್ದು.–** ಯಾವುದೇ ಆವರಣದ ಪರಿಣಾಮಕಾರಿ ಚರಂಡಿ ವ್ಯವಸ್ಥೆಗಾಗಿನ ಕ್ರಮಗಳನ್ನು ಕೈಗೊಳ್ಳತಕ್ಕುದು ಅಥವಾ ಕೈಗೊಳ್ಳಬಹುದು ಎಂದು ಈ ಅಧ್ಯಾಯದಲ್ಲಿ ಉಪಬಂಧಿಸಿರುವಾಗಲೆಲ್ಲಾ, ಮಂಡಳಿಯ ಪ್ರತ್ಯೇಕ ಗ್ರಾಮಸಾರ ಚರಂಡಿ ಅಥವಾ ನಿಗಮ ಚರಂಡಿ ಅಥವಾ ಇತರ ಸೂಕ್ತ ಸ್ಥಳಗಳಿಗೆ ಪ್ರತಿಯೊಂದು ಹರಿದುಹೋಗುವ ಹೊಲಸು ಮತ್ತು ಕಲುಷಿತವಾದ ನೀರಿಗೆ ಒಂದು ಚರಂಡಿ ಮತ್ತು ಮಳೆ ನೀರು ಮತ್ತು ಕಲುಷಿತವಲ್ಲದ ಅಂತರ್ಜಲಕ್ಕಾಗಿನ ಅಥವಾ ಮಳೆಯ ನೀರು ಮತ್ತು ಕಲುಷಿತವಲ್ಲದ ಅಂತರ್ಜಲ ಇವೆರಡಕ್ಕೂ ಪೂರ್ಣವಾಗಿ ವಿಭಿನ್ನವಾದ ಒಂದು ಚರಂಡಿ ಇರತಕ್ಕದ್ದು ಎಂದು ಅಗತ್ಯಪಡಿಸುವುದು ಮಂಡಳಿಗೆ ಸಕ್ಷಮವಾಗಿರತಕ್ಕದ್ದು.

xxx xxx xxx

**76. ಅನುಮತಿಯಿಲ್ಲದೆ ಗ್ರಾಮಸಾರ ಚರಂಡಿಗಳ ಮೇಲೆ ಕಟ್ಟಡಗಳು ಮತ್ತು ಖಾಸಗಿ ಬೀದಿಗಳನ್ನು ಕಟ್ಟತಕ್ಕದ್ದಲ್ಲ ಅಥವಾ ನಿರ್ಮಿಸತಕ್ಕದ್ದಲ್ಲ.–** (1) ಮಂಡಳಿಯ ಬರಹದಲ್ಲಿನ ಅನುಮತಿಯಿಲ್ಲದೆ ಮಂಡಳಿಯು ನಿರ್ಮಿಸಿದ ಅಥವಾ ಇಟ್ಟುಕೊಂಡು ಬಂದಿರುವ ಅಥವಾ ಅದರಲ್ಲಿ ನಿಹಿತವಾದ ಮಂಡಳಿಯ ಯಾವುದೇ ಗ್ರಾಮಸಾರ ಚರಂಡಿಯ ಮೇಲೆ ಯಾವುದೇ ಖಾಸಗಿ ಬೀದಿಯನ್ನು ನಿರ್ಮಿಸತಕ್ಕದ್ದಲ್ಲ ಮತ್ತು ಯಾವುದೇ ಕಟ್ಟಡ, ಗೋಡೆ, ಬೇಲಿ ಅಥವಾ ಇತರ ರಚನೆಯನ್ನು ಕಟ್ಟತಕ್ಕದ್ದಲ್ಲ.

xxx xxx xxx

**84. ಗ್ರಾಮಸಾರ ಚರಂಡಿ ವ್ಯವಸ್ಥೆ ಬಗ್ಗೆ ವಿನಿಯಮಗಳು.–** (1) ಮಂಡಳಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಈ ಅಧ್ಯಾಯದ ಉದ್ದೇಶಗಳನ್ನು ಈಡೇರಿಸಲು ವಿನಿಯಮಗಳನ್ನು ರಚಿಸಬಹುದು.

xxx xxx xxx

(3) ಈ ಪ್ರಕರಣದಡಿಯಲ್ಲಿ ಯಾವುದೇ ವಿನಿಯಮವನ್ನು ಮಾಡುವಲ್ಲಿ, ಅದರ ಉಲ್ಲಂಘನೆಗೆ ಒಂದು ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯೊಂದಿಗೆ ಮತ್ತು ಉಲ್ಲಂಘನೆಯು ಮುಂದುವರೆದ ಸಂದರ್ಭದಲ್ಲಿ, ಅಂಥ ಉಲ್ಲಂಘನೆಯು ನಿಲ್ಲಿಸುವಂತೆ ಮಂಡಳಿಯಿಂದ ನೋಟೀಸು ಸ್ವೀಕೃತವಾದ ತರುವಾಯ, ಹಾಗೆ ಉಲ್ಲಂಘನೆಯಾದ ಪ್ರತಿದಿನಕ್ಕೆ ಹತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದ ಹೆಚ್ಚುವರಿ ಜುಲ್ಮಾನೆಯೊಂದಿಗೆ ದಂಡಿಸತಕ್ಕದ್ದು ಎಂದು ಮಂಡಳಿಯು ಉಪಬಂಧ ಕಲ್ಪಿಸಬಹುದು.

xxx xxx xxx

**128. Amendment of Mysore Act LXIX of 1949.**—(1) With effect from the date on which Chapter IV comes into force, the City of Bangalore Municipal Corporation Act, 1949, shall have effect subject to the following amendments, namely:—

(i) sections 171, 172, 173, 174, 175, 176, 177, 178, 179, 180, 181 and 182 shall be omitted;

(ii) in section 367,—

(a) in clause (5), for sub-clause (a), the following sub-clause shall be substituted, namely:—

"(a) for the use of public tanks, wells, conduits or other works for the use of water therefrom;" and sub-clauses (c), (d), (e), (f), (g), (h) and (i) shall be omitted:

(b) in clause (7), in sub-clause (e), the words "closed cesspools and" shall be omitted and in sub-clause (f), the words "pipes or" shall be omitted.

(2) With effect from the date on which Chapter V comes into force, the City of Bangalore Municipal Corporation Act, 1949, shall have effect subject to the following amendments, namely:—

(i) in section 184, for the words 'public drains, pipes and drainage works', the words "public surface drains and drainage works connected therewith" shall be substituted;

(ii) in section 187,—

(a) in sub-sections (1) and (2), for the words "public drain", the words "public surface drain" shall be substituted;

(b) sub-sections (3) and (4) shall be omitted;

(iii) in sections 188 and 189, for the words "public drain", the words "public surface drain" shall be substituted;

(iv) in section 199, the word "water-supply" shall be omitted;

(v) in section 368, the words "and supply of water to" and "and water closets, earth closets, privies, ash pits and cess pool in connection with buildings and the keeping of water closets supplied with sufficient water for flushing" shall be omitted.

(3) Notwithstanding the amendments to the provisions of the City of Bangalore Municipal Corporation Act, 1949, by sub-section (1) or sub-section (2), the property tax payable to the Corporation as water tax or sanitary cess shall continue to be payable to the Corporation in respect of the year for which such tax or cess would have been payable before the coming into force of Chapter V of this Act.

(4) Notwithstanding anything contained in the City of Bangalore Municipal Corporation Act, 1949, after the coming into force of Chapter IV of this Act, the Corporation shall pay to the Board such percentage of the property tax collected as water tax during such years as the State Government may by order specify

**Extract from the Karnataka Municipal Corporations Act, 1976 (Karnataka Act 14 of 1977).**

XX XX XX

**110. General exemptions.-**(1) The following buildings and lands shall be exempted from the property tax:-

XX XX XX

(k) buildings or lands belonging to any Urban Development Authority constituted under the Karnataka Urban Development Authorities Act, 1987, the Bangalore Development Authority, the Karnataka Housing Board or any local authority the possession of which has not been delivered to any person, in pursuance of any grant, allotment or lease;

XX XX XX

**Extract from the Karnataka Ground Water (Regulation for Protection of sources of drinking water) Act, 1999 (Karnataka Act 44 of 2003)**

XX XX XX

**2. Definitions.-** In this Act unless the context otherwise requires.-

(1) "appropriate authority" means the Deputy Commissioner and includes any officer, not below the rank of an Assistant Commissioner as the Government may by notification appoint for the purposes of this Act, and different officers may be appointed for different local areas of the State.

XX XX XX

**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೮, ೨೦೧೦ (ಫಾಲ್ಗುಣ ೧೭, ಶಕ ವರ್ಷ ೧೯೩೧) | ನಂ. ೨೨೭ |
|---|---|---|


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/37/Bill/2010, Bangalore, Dated : 8th March, 2010**

The following Bill was introduced in Legislative Assembly on 8th March, 2010.

**AZIM PREMJI UNIVERSITY BILL, 2010**

**(L.A. Bill No. 03 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಐದನೇ ಅಧಿವೇಶನ**

**ಅಜೀಂ ಪ್ರೇಂಜೀ ವಿಶ್ವವಿದ್ಯಾಲಯ ವಿಧೇಯಕ, 2010**
**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 03)**

ಶಿಕ್ಷಣ ಮತ್ತು ಸಂಬಂಧಪಟ್ಟ ಅಭಿವೃದ್ಧಿ ವಲಯಗಳಲ್ಲಿ ಅಸಾಧಾರಣ ನೇತೃತ್ವ, ಸಂಶೋಧಿತ ಜ್ಞಾನ ಮತ್ತು ನವ ವಿಚಾರಧಾರೆಗಳ ಅಭಿವೃದ್ಧಿಯ ಮೂಲಕ ಒಂದು ರೂಢಮೂಲ ಬದಲಾವಣೆಯನ್ನು ಉತ್ತೇಜಿಸಿ, ಪರಿಕಲ್ಪಿಸಿ ಜಾರಿಗೆ ತರುವ ಉದ್ದೇಶದಿಂದ ಖಾಸಗಿ ವಲಯದಲ್ಲಿ ಒಂದು ವಿಶ್ವವಿದ್ಯಾಲಯವನ್ನು ಕರ್ನಾಟಕ ರಾಜ್ಯದಲ್ಲಿ ಸ್ಥಾಪಿಸಿ ನಿಗಮಿತಗೊಳಿಸುವುದಕ್ಕಾಗಿ ಒಂದು ವಿಧೇಯಕ.

ಕರ್ನಾಟಕ ರಾಜ್ಯದಲ್ಲಿ ಶಿಕ್ಷಣ ಮತ್ತು ಸಂಬಂಧಪಟ್ಟ ಅಭಿವೃದ್ಧಿ ವಲಯಗಳಲ್ಲಿ ಅಸಾಧಾರಣ ನೇತೃತ್ವ, ಸಂಶೋಧಿತ ಜ್ಞಾನ ಮತ್ತು ನವ ವಿಚಾರಧಾರೆಗಳ ಅಭಿವೃದ್ಧಿಯ ಮೂಲಕ ಒಂದು ರೂಢಮೂಲ ಬದಲಾವಣೆಯನ್ನು ಉತ್ತೇಜಿಸಿ, ಪರಿಕಲ್ಪಿಸಿ, ಜಾರಿಗೆ ತರುವ ಉದ್ದೇಶದಿಂದ ಖಾಸಗಿ ವಲಯದಲ್ಲಿ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**ಅಧ್ಯಾಯ – I**

**ಪ್ರಾಥಮಿಕ**

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಅಜೀಂ ಪ್ರೇಂಜಿ ವಿಶ್ವವಿದ್ಯಾಲಯ ಅಧಿನಿಯಮ, 2010 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪಿಸತಕ್ಕದ್ದು.

(3) ಇದು 2009ರ ನವೆಂಬರ್ 24ನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಪ್ರಶಿಕ್ಷಣ ಪರಿಷತ್ತು (ಅಕೆಡೆಮಿಕ್ ಕೌನ್ಸಿಲ್)" ಎಂದರೆ, 24ನೇ ಪ್ರಕರಣದಡಿಯಲ್ಲಿ ಸ್ಥಾಪಿಸಲಾದ ವಿಶ್ವವಿದ್ಯಾಲಯದ ಪ್ರಶಿಕ್ಷಣ ಪರಿಷತ್ತು;

(ಬಿ) "ಕಾರ್ಯಸೂಚಿ ವಿಷಯಗಳು", ಎಂದರೆ, ಶಾಸನಗಳಲ್ಲಿ ಹೆಸರಿಸಬಹುದಾದ ಮತ್ತು ಒಂದು ಸಭೆಯಲ್ಲಿ ಆ ವಿಷಯಗಳನ್ನು ಮತ್ತು ಕಲಾಪಗಳನ್ನು ಅನುಮೋದಿಸಬಹುದೆಂದು ತಮ್ಮ ಸಮ್ಮತಿ ಸೂಚಿಸಿ ಕುಲಾಧಿಪತಿಯವರು ಮುಂಚಿತವಾಗಿಯೇ ಲಿಖಿತ ಅನುಮೋದನೆಯನ್ನು ಕೊಟ್ಟಿದ್ದಾಗ ಮಾತ್ರವೇ ಸಂದರ್ಭಾನುಸಾರ ಪ್ರಬಂಧಕರ ಮಂಡಳಿ ಅಥವಾ ಆಡಳಿತ ಮಂಡಳಿ ಅಥವಾ ಯಾವುದೇ ಸಮಿತಿಯವರು ಕಾರ್ಯಸೂಚಿಯಲ್ಲಿ ಸೇರಿಸಬಹುದಾದ ಅಥವಾ ಚರ್ಚೆಗೆ ತೆಗೆದುಕೊಂಡು ನಿರ್ಣಯವನ್ನು ಕೊಡಬಹುದಾದ ಎಲ್ಲಾ ವಿಷಯಗಳು ಮತ್ತು ಕಲಾಪಗಳು;

(ಸಿ) "ಪ್ರಬಂಧಕರ ಮಂಡಳಿ" ಎಂದರೆ, 22ನೇ ಪ್ರಕರಣದಲ್ಲಿ ನಿರ್ದಿಷ್ಟವಾಗಿ ಹೇಳಿರುವ ವಿಶ್ವವಿದ್ಯಾಲಯದ ಪ್ರಬಂಧಕರ ಮಂಡಳಿ;

(ಡಿ) "ಆಡಳಿತ ಮಂಡಳಿ" ಎಂದರೆ, 23ನೇ ಪ್ರಕರಣದಲ್ಲಿ ನಿರ್ದಿಷ್ಟ ಪಡಿಸಿದ ವಿಶ್ವವಿದ್ಯಾಲಯದ ಆಡಳಿತ ಮಂಡಳಿ;

(ಇ) "ಕುಲಾಧಿಪತಿ", "ಕುಲಪತಿ", "ಸಹಕುಲಪತಿ" ಎಂದರೆ, ಅನುಕ್ರಮವಾಗಿ ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ ಮತ್ತು ಸಹಕುಲಪತಿ;

(ಎಫ್) "ಕ್ಯಾಂಪಸ್" ಎಂದರೆ, ಅದು ಎಲ್ಲಾದರೂ ಇರಲಿ ವಿಶ್ವವಿದ್ಯಾಲಯವು ಸ್ಥಾಪಿಸಿದ, ನಿರ್ವಹಿಸಿದ ಅಥವಾ ಮಾನ್ಯತೆ ನೀಡಿದ ಒಂದು ಕ್ಯಾಂಪಸ್;

(ಜಿ) "ಸಮಿತಿಗಳು" ಎಂದರೆ, ಸಂದರ್ಭಾನುಸಾರ ವಿಶ್ವವಿದ್ಯಾಲಯದ ವಿವಿಧ ಕಾರ್ಯಕರ್ತರು ರಚಿಸಿರುವ ಸಮಿತಿಗಳು ಮತ್ತು ಅದರಲ್ಲಿ ನಾಮನಿರ್ದೇಶನ ಸಮಿತಿ, ಹಣಕಾಸು ಸಮಿತಿ, ದೂರಶಿಕ್ಷಣ ಸಮಿತಿ ಮತ್ತು ಇತರ ಯಾವುವೇ ಸಮಿತಿಗಳು ಒಳಗೊಳ್ಳುತ್ತವೆ;

(ಎಚ್) "ಘಟಕ ಕಾಲೇಜು" ಎಂದರೆ, ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಒಂದು ಕಾಲೇಜು ಅಥವಾ ಸಂಸ್ಥೆ;

(ಐ) "ದೂರಶಿಕ್ಷಣ" ಎಂದರೆ, ದೃಶ್ಯ ಸಂಪರ್ಕ, ಧ್ವನಿ ಸಂಪರ್ಕ, ಗಣಕಯಂತ್ರ, ಬಹುಮಾಧ್ಯಮ (ಮಲ್ಟಿ ಮಿಡಿಯ) ಪ್ರಸಾರ, ದೂರದರ್ಶನ ಪ್ರಸಾರ (ಟೆಲಿಕ್ಯಾಸ್ಟ್), ತಂತ್ರಜ್ಞಾನಗಳು ಮತ್ತು ಸಂಪರ್ಕಸಾಧನಗಳನ್ನು ಬಳಸಿಕೊಂಡು, ಒಂದು ತರಗತಿ, ಕಟ್ಟಡ ಅಥವಾ ನಿವೇಶನದಿಂದ ದೂರದಲ್ಲಿರುವ ಬೇರೊಂದು ತರಗತಿ, ಕಟ್ಟಡ ಅಥವಾ ನಿವೇಶನದಲ್ಲಿರುವವರಿಗೆ ಶಿಕ್ಷಣವನ್ನು ನೀಡುವ ಪ್ರಕ್ರಿಯೆ ಮತ್ತು ಇದು ಅಂಚೆ ಶಿಕ್ಷಣ, ವಿಚಾರಗೋಷ್ಠಿ, ಸಂಪರ್ಕ ಕಾರ್ಯಕ್ರಮ ಅಥವಾ ಅಂಥ ವಿಧಾನಗಳ ಯಾವುದೇ ಎರಡು ಅಥವಾ ಹೆಚ್ಚಿನ ಸಂಯೋಜನೆಗಳು ಮುಂತಾದವುಗಳನ್ನು ಒಳಗೊಳ್ಳುತ್ತದೆ;

(ಜೆ) "ದೂರ ಶಿಕ್ಷಣ ಸಮಿತಿ" ಎಂದರೆ, 26ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವಂಥ ವಿಶ್ವವಿದ್ಯಾಲಯದ ದೂರ ಶಿಕ್ಷಣ ಸಮಿತಿ;

(ಕೆ) "ಹಣಕಾಸು ಸಮಿತಿ" ಎಂದರೆ, 27ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವಂಥ ವಿಶ್ವವಿದ್ಯಾಲಯದ ಹಣಕಾಸು ಸಮಿತಿ;

(ಎಲ್) "ಪ್ರತಿಷ್ಠಾನ" ಎಂದರೆ, ಕಂಪೆನಿಗಳ ಅಧಿನಿಯಮ, 1956ರ 25ನೇ ಪ್ರಕರಣದಡಿಯಲ್ಲಿ ನೋಂದಾಯಿತವಾದ ಒಂದು ಕಂಪೆನಿಯಾದ ಅಜೀಂ ಪ್ರೇಂಜೀ ಪ್ರತಿಷ್ಠಾನ ಅಥವಾ ಕಂಪೆನಿಗಳ ಅಧಿನಿಯಮ, 1956ರ 25ನೇ ಪ್ರಕರಣದಡಿಯಲ್ಲಿ ಶ್ರೀ ಅಜೀಂ ಪ್ರೇಂಜಿಯವರು ಈ ಉದ್ದೇಶಕ್ಕಾಗಿ ರಚಿಸಿ ನೋಂದಾಯಿಸಿರುವ ಯಾವುದೇ ಇತರ ಪ್ರತಿಷ್ಠಾನ;

(ಎಂ) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಎನ್) "ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳು" ಎಂದರೆ, ವಿಶ್ವವಿದ್ಯಾಲಯ ಅನುದಾನ ಆಯೋಗ, ಅಖಿಲ ಭಾರತ ತಾಂತ್ರಿಕ ವಿದ್ಯಾಪರಿಷತ್ತು, ರಾಷ್ಟ್ರೀಯ ಬೋಧಕ ಶಿಕ್ಷಣ ಪರಿಷತ್ತು, ಭಾರತೀಯ ವೈದ್ಯಕೀಯ ಪರಿಷತ್ತು, ಭಾರತೀಯ ಔಷಧ ವಿಜ್ಞಾನ ಪರಿಷತ್ತು, ರಾಷ್ಟ್ರೀಯ ಮೌಲ್ಯಮಾಪನ ಮತ್ತು ಅಧಿಮಾನ್ಯತಾ ಪರಿಷತ್ತು, ಭಾರತೀಯ ಕೃಷಿ ಸಂಶೋಧನಾ ಪರಿಷತ್ತು, ದೂರಶಿಕ್ಷಣ ಪರಿಷತ್ತು, ಭಾರತೀಯ ವೈಜ್ಞಾನಿಕ ಮತ್ತು ಸಂಶೋಧನಾ ಪರಿಷತ್ತು ಮುಂತಾದ, ಉನ್ನತ ಶಿಕ್ಷಣದಲ್ಲಿ ಮಾನಕ ಗುಣಮಟ್ಟದ ಶಿಕ್ಷಣ ದೊರೆಯುವಂತೆ ನೋಡಿಕೊಳ್ಳುವುದಕ್ಕಾಗಿ ಪ್ರಮಾಣಕಗಳು ಮತ್ತು ಷರತ್ತುಗಳನ್ನು ವಿಧಿಸುವುದಕ್ಕಾಗಿ, ಕೇಂದ್ರ ಸರ್ಕಾರವು ಸ್ಥಾಪಿಸಿರುವ ಒಂದು ಸಂಸ್ಥೆ ಮತ್ತು ಇದರಲ್ಲಿ ಸರ್ಕಾರವೂ ಸೇರಿರುತ್ತದೆ;

(ಒ) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದಡಿಯಲ್ಲಿ ರಚಿಸಲಾದ ನಿಯಮಗಳ ಮೂಲಕ ರಾಜ್ಯ ಸರ್ಕಾರದಿಂದ ನಿಯಮಿಸಲಾದುದು;

(ಪಿ) "ಒಂದು ಘಟಕ ಕಾಲೇಜಿಗೆ ಸಂಬಂಧಪಟ್ಟಂತೆ ಪ್ರಾಂಶುಪಾಲರು" ಎಂದರೆ, ಘಟಕ ಕಾಲೇಜಿನ ಮುಖ್ಯಸ್ಥರು ಮತ್ತು ಪ್ರಾಂಶುಪಾಲರು ನೇಮಕವಾಗಿರದಿದ್ದಲ್ಲಿ ಅಥವಾ ನೇಮಕವಾದ ಪ್ರಾಂಶುಪಾಲರ ಗೈರುಹಾಜರಿಯಲ್ಲಿ ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸಲು ತಾತ್ಕಾಲಿಕವಾಗಿ ನೇಮಕಗೊಂಡಿರುವ ಉಪಪ್ರಾಂಶುಪಾಲರು ಅಥವಾ ಇತರ ಯಾವುದೇ ವ್ಯಕ್ತಿಯೂ ಇದರಲ್ಲಿ ಒಳಗೊಳ್ಳುತ್ತಾರೆ;

(ಕ್ಯೂ) "ಕುಲಸಚಿವರು" ಎಂದರೆ, ವಿಶ್ವವಿದ್ಯಾಲಯದ ಕುಲಸಚಿವರು;

(ಆರ್) "ಪ್ರಾದೇಶಿಕ ಕೇಂದ್ರ" ಎಂದರೆ, ಯಾವುದೇ ಪ್ರದೇಶದಲ್ಲಿನ ಅಧ್ಯಯನ ಕೇಂದ್ರಗಳ ಕಾರ್ಯವನ್ನು ಸಮನ್ವಯಗೊಳಿಸುವ ಮತ್ತು ಮೇಲ್ವಿಚಾರಣೆ ಮಾಡುವ ಉದ್ದೇಶಕ್ಕಾಗಿ ಮತ್ತು ಅಂಥ ಕೇಂದ್ರಕ್ಕೆ ಆಡಳಿತ ಮಂಡಳಿಯು ವಹಿಸಿಕೊಡಬಹುದಾದ ಇತರ ಕರ್ತವ್ಯಗಳನ್ನು ನೆರವೇರಿಸುವುದಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿಸಿದ ಅಥವಾ ನಿರ್ವಹಿಸಿಕೊಂಡುಬರುವ ಒಂದು ಕೇಂದ್ರ;

(ಎಸ್) ಈ ಅಧಿನಿಯಮಕ್ಕೆ ಸಂಬಂಧಿಸಿದಂತೆ "ಪ್ರಾಯೋಜಕ ಪ್ರಾಧಿಕಾರ" ಅಥವಾ "ಪ್ರಾಯೋಜಕ ಸಂಸ್ಥೆ" ಎಂದರೆ, ಪ್ರತಿಷ್ಠಾನ;

(ಟಿ) "ರಾಜ್ಯ" ಎಂದರೆ, ಕರ್ನಾಟಕ ರಾಜ್ಯ;

(ಯು) "ಶಾಸನಗಳು" ಮತ್ತು "ವಿನಿಯಮಗಳು" ಎಂದರೆ, ವಿಶ್ವವಿದ್ಯಾಲಯದ ಸಂಬಂಧಿಸಿದ ಪ್ರಾಧಿಕಾರಗಳು ರಚಿಸಿದ ಅನುಕ್ರಮವಾಗಿ ವಿಶ್ವವಿದ್ಯಾಲಯದ ಶಾಸನಗಳು ಮತ್ತು ವಿನಿಯಮಗಳು;

(ವಿ) "ಅಧ್ಯಯನ ಕೇಂದ್ರ" ಎಂದರೆ, ವಿದ್ಯಾರ್ಥಿಗಳಿಗೆ ಅಗತ್ಯವಾದ ಬುದ್ಧಿವಾದ, ಸಲಹೆಗಳನ್ನು ನೀಡುವ ಅಥವಾ ಇತರ ಯಾವುದೇ ನೆರವನ್ನು ನೀಡುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿಸಿದ, ನಿರ್ವಹಿಸಿಕೊಂಡುಬಂದ ಅಥವಾ ಮಾನ್ಯತೆ ನೀಡಿದ ಒಂದು ಕೇಂದ್ರ;

(ಡಬ್ಲ್ಯೂ) "ಅಧ್ಯಾಪಕರು" ಎಂದರೆ, ಒಬ್ಬ ಪ್ರಾಧ್ಯಾಪಕರು, ಸಹಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ಪ್ರವಾಚಕರು ಅಥವಾ ಉಪನ್ಯಾಸಕರು ಅಥವಾ ವಿಶ್ವವಿದ್ಯಾಲಯದಲ್ಲಿ ಅಥವಾ ಒಂದು ಘಟಕ ಕಾಲೇಜಿನಲ್ಲಿ ಬೋಧಿಸುವುದಕ್ಕೆ ಅಥವಾ ಸಂಶೋಧನೆ ನಡೆಸುವುದಕ್ಕೆ ಅಥವಾ ಸಂಶೋಧನೆಗೆ ಮಾರ್ಗದರ್ಶನ ನೀಡುವುದಕ್ಕೆ ನೇಮಕವಾದಂಥ ಯಾವುದೇ ವ್ಯಕ್ತಿ ಎಂದರ್ಥ ಹಾಗೂ ಅವರನ್ನು ಒಳಗೊಳ್ಳುತ್ತದೆ ಮತ್ತು ವಿಶ್ವವಿದ್ಯಾಲಯ ಅನುದಾನ ಆಯೋಗವು ನಿಯಮಿಸಿದ ಗುಣಮಟ್ಟಗಳಿಗೆ ಅನುಸಾರವಾಗಿ ಇರುವ ಘಟಕ ಕಾಲೇಜಿನ ಪ್ರಾಂಶುಪಾಲರು ಇದರಲ್ಲಿ ಒಳಗೊಳ್ಳುತ್ತಾರೆ;

(ಎಕ್ಸ್) "ವಿಶ್ವವಿದ್ಯಾಲಯ ಅನುದಾನಗಳ ಆಯೋಗ" ಎಂದರೆ, ವಿಶ್ವವಿದ್ಯಾಲಯ ಅನುದಾನಗಳ ಆಯೋಗ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 3) 4ನೇ ಪ್ರಕರಣದಡಿಯಲ್ಲಿ ಸ್ಥಾಪಿತವಾದ ಆಯೋಗ;

(ವೈ) "ವಿಶ್ವವಿದ್ಯಾಲಯ" ಎಂದರೆ, 4ನೇ ಪ್ರಕರಣದಡಿಯಲ್ಲಿ ಸ್ಥಾಪಿಸಿ ನಿಗಮಿತಗೊಳಿಸಲಾದ ಅಜ಼ೀಂ ಪ್ರೇಂಜಿ ವಿಶ್ವವಿದ್ಯಾಲಯ;

(ಜ಼ೆಡ್) "ಸಂದರ್ಶಕರು" ಎಂದರೆ, 13ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ವಿಶ್ವವಿದ್ಯಾಲಯದ ಸಂದರ್ಶಕರು.

## ಅಧ್ಯಾಯ– II

## ವಿಶ್ವವಿದ್ಯಾಲಯ ಮತ್ತು ಪ್ರಾಯೋಜಕ ಸಂಸ್ಥೆ

**3. ವಿಶ್ವವಿದ್ಯಾಲಯದ ಸ್ಥಾಪನೆಗೆ ಪ್ರಸ್ತಾವ.–** (1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ಅದಕ್ಕನುಸಾರವಾಗಿ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಹಕ್ಕನ್ನು ಪ್ರತಿಷ್ಠಾನವು ಹೊಂದಿರತಕ್ಕದ್ದು.

(2) ಪ್ರತಿಷ್ಠಾನವು ರಾಜ್ಯ ಸರ್ಕಾರಕ್ಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪ್ರಸ್ತಾವವನ್ನು ಸಲ್ಲಿಸತಕ್ಕದ್ದು.

(3) ಪ್ರಸ್ತಾವವು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಪ್ರತಿಷ್ಠಾನದ ವಿವರಗಳೊಂದಿಗೆ ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು;

(ii) ವಿಶ್ವವಿದ್ಯಾಲಯದ ವ್ಯಾಪ್ತಿ ಮತ್ತು ಸ್ಥಾನಮಾನ ಹಾಗೂ ಭೂಮಿಯ ಲಭ್ಯತೆ;

(iii) ಪ್ರಾರಂಭದ ದಿನಾಂಕದಿಂದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಯಲ್ಲಿ ವಿಶ್ವವಿದ್ಯಾಲಯವು ಕೈಗೊಳ್ಳಬೇಕೆಂದಿರುವ ಅಧ್ಯಯನ ಮತ್ತು ಸಂಶೋಧನಾ ಕಾರ್ಯಕ್ರಮಗಳ ಸ್ವರೂಪ ಮತ್ತು ಬಗೆಗಳು;

(iv) ಪ್ರಾರಂಭಿಸಬೇಕೆಂದು ಪ್ರಸ್ತಾಪಿಸಿರುವ ವಿದ್ಯಾ ವಿಭಾಗಗಳು (ಫ್ಯಾಕಲ್ಟಿಗಳು), ಅಧ್ಯಯನ ಕ್ರಮಗಳು ಮತ್ತು ಸಂಶೋಧನೆಗಳ ಸ್ವರೂಪ;

(v) ಕಟ್ಟಡಗಳು, ಸಲಕರಣೆಗಳು ಮತ್ತು ರಚನಾ ಸೌಕರ್ಯಗಳನ್ನು ಒದಗಿಸುವಂಥ ಕ್ಯಾಂಪಸ್ ಅಭಿವೃದ್ಧಿ;

(vi) ಪ್ರಾರಂಭದ ದಿನಾಂಕದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಯಲ್ಲಿ ಕೈಗೊಳ್ಳಲಿರುವ ಬಂಡವಾಳ ವೆಚ್ಚಕ್ಕೆ ಹಂತಹಂತವಾಗಿ ಒದಗಿಸಲಿರುವ ಹಣದ ಏರ್ಪಾಟು ವಿವರ;

(vii) ಬಾಬುವಾರು ಆವರ್ತಕ ವೆಚ್ಚ, ಆರ್ಥಿಕ ಮೂಲಗಳು ಮತ್ತು ಪ್ರತಿಯೊಬ್ಬ ವಿದ್ಯಾರ್ಥಿಗೆ ತಗಲುವ ಅಂದಾಜು ವೆಚ್ಚ;

(viii) ಸಂಪನ್ಮೂಲ ಸಂಗ್ರಹಣೆಗಾಗಿ ಯೋಜನೆ ಮತ್ತು ಅದಕ್ಕೆ ಬಂಡವಾಳದಿಂದ ತಗಲುವ ವೆಚ್ಚ ಮತ್ತು ಪ್ರತಿಯೊಂದು ಮೂಲಕ್ಕೂ ಮರು ಸಂದಾಯ ಮಾಡುವ ರೀತಿ;

(ix) ವಿದ್ಯಾರ್ಥಿಗಳಿಂದ ಶುಲ್ಕ ವಸೂಲು ಮಾಡಿ ಆಂತರಿಕವಾಗಿ ನಿಧಿ ಸಂಗ್ರಹಿಸುವ ಯೋಜನೆ, ಸಲಹಾ ಸೇವೆ ಮತ್ತು ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳಿಗೆ ಸಂಬಂಧಿಸಿದ ಇತರ ಚಟುವಟಿಕೆಗಳಿಂದ ನಿರೀಕ್ಷಿತ ಆದಾಯಗಳು ಮತ್ತು ಇತರ ನಿರೀಕ್ಷಿತ ಆದಾಯಗಳು;

(x) ಘಟಕವೊಂದಕ್ಕೆ ತಗಲುವ ವೆಚ್ಚದ ಶುಲ್ಕದಲ್ಲಿ ಆರ್ಥಿಕವಾಗಿ ದುರ್ಬಲವಾದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಎಷ್ಟರವರೆಗೆ ರಿಯಾಯಿತಿ ಅಥವಾ ವಿನಾಯತಿ ಕೊಡಲಾಗುವುದು, ಉಚಿತ ಶಿಕ್ಷಣ, ವಿದ್ಯಾರ್ಥಿ ವೇತನ ನೀಡಲಾಗುವುದು ಎಂಬುದರ ವಿವರಗಳನ್ನು ಮತ್ತು ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳಿಗೆ ಅಥವಾ ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳು ಪ್ರಾಯೋಜಿಸಿದ ವಿದ್ಯಾರ್ಥಿಗಳಿಗೆ ಮತ್ತು ಭಾರತವನ್ನುಳಿದು ಇತರ ರಾಷ್ಟ್ರಗಳ ವಿದ್ಯಾರ್ಥಿಗಳಿಗೆ ವಿಧಿಸತಕ್ಕ ಶುಲ್ಕದ ದರಗಳು ಬೇರೆ ಬೇರೆ ಇದ್ದಲ್ಲಿ ಅವುಗಳನ್ನು ಸೂಚಿಸುವ ಶುಲ್ಕ ರಚನೆಯ ವಿವರಗಳು;

(xi) ಸಂಬಂಧಪಟ್ಟ ವಿದ್ಯಾ ವಿಭಾಗದಲ್ಲಿ ಎಷ್ಟು ವರ್ಷಗಳ ಅನುಭವ ಮತ್ತು ಪರಿಣಿತಿ ಪ್ರತಿಷ್ಠಾನವು ದೊರಕಿಸಿಕೊಡಲಿದೆ ಹಾಗೂ ಅದರ ಹಣಕಾಸಿನ ಸಂಪನ್ಮೂಲಗಳು;

(xii) ವಿಶ್ವವಿದ್ಯಾಲಯದಲ್ಲಿರುವ ಅಧ್ಯಯನ ಕ್ರಮಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕಾಗಿ ಇರುವ ವ್ಯವಸ್ಥೆ;

(xiii) ವಿಶ್ವವಿದ್ಯಾಲಯವು ಸ್ಥಾಪನೆಯಾಗುವುದಕ್ಕೆ ಮುಂಚೆ ನೆರವೇರಿಸಬೇಕೆಂದು ರಾಜ್ಯ ಸರ್ಕಾರವು ಅಗತ್ಯಪಡಿಸಬಹುದಾದಂಥ ಇತರ ಷರತ್ತುಗಳ ನೆರವೇರಿಕೆ ಯಾವ ಹಂತದಲ್ಲಿದೆ.

(4) ರಾಜ್ಯ ಸರ್ಕಾರವು, ಸ್ವೀಕೃತವಾದ ಪ್ರಸ್ತಾವಗಳನ್ನು ಪರೀಕ್ಷಿಸುವುದಕ್ಕಾಗಿ ಒಂದು ಪರಿಶೋಧನಾ ಸಮಿತಿಯನ್ನು ರಚಿಸತಕ್ಕದ್ದು. ಅದು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಮಾಡತಕ್ಕದ್ದು.

**4. ವಿಶ್ವವಿದ್ಯಾಲಯದ ಸ್ಥಾಪನೆ.–** (1) ರಾಜ್ಯ ಸರ್ಕಾರವು, ಪರಿಶೋಧನಾ ಸಮಿತಿಯು ಮಾಡಿದ ಶಿಫಾರಸ್ಸುಗಳನ್ನು ಪರಿಶೀಲಿಸಿದ ತರುವಾಯ ಮತ್ತು ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ಪ್ರತಿಷ್ಠಾನವು 3ನೇ ಪ್ರಕರಣದ (3)ನೇ ಉಪ–ಪ್ರಕರಣದಲ್ಲಿ ಅಗತ್ಯಪಡಿಸಲಾದ ವಿವರಗಳನ್ನು ಒದಗಿಸಿದೆ ಎಂದು ಮನಗಂಡರೆ, ಅದು 46ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸಬೇಕೆಂದು ಪ್ರತಿಷ್ಠಾನಕ್ಕೆ ನಿರ್ದೇಶನ ನೀಡಬಹುದು.

(2) ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಸ್ಥಾಪನೆಯ ತರುವಾಯ, ರಾಜ್ಯಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ರಾಜ್ಯದಲ್ಲಿ "ಅಜೀಂ ಪ್ರೇಂಜಿ ವಿಶ್ವವಿದ್ಯಾಲಯ" ಎಂಬ ಹೆಸರಿನ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕೆ ಮಂಜೂರಾತಿಯನ್ನು ನೀಡಬಹುದು.

(3) ಪ್ರಾಯೋಜಕ ಸಂಸ್ಥೆಯು ರಾಜ್ಯದಲ್ಲಿ ನಿರ್ಧರಿಸಬಹುದಾದಂಥ ಸ್ಥಳದಲ್ಲಿ ವಿಶ್ವವಿದ್ಯಾಲಯದ ಕೇಂದ್ರಕಾರ್ಯಸ್ಥಾನವು ಇರತಕ್ಕದ್ದು. ವಿಶ್ವವಿದ್ಯಾಲಯವು ತನ್ನ ಕ್ಯಾಂಪಸ್ಸುಗಳನ್ನು ಅಥವಾ ಪ್ರಾದೇಶಿಕ ಕೇಂದ್ರಗಳನ್ನು, ಅಧ್ಯಯನ ಕೇಂದ್ರಗಳನ್ನು, ಭಾರತದಲ್ಲಿ ಅಥವಾ ವಿದೇಶಗಳಲ್ಲಿ, ಆ ಬಗ್ಗೆ ಸಂಬಂಧಪಟ್ಟ ಸರ್ಕಾರಗಳ ಅನುಮತಿಯನ್ನು ಪಡೆದುಕೊಳ್ಳಬೇಕಾಗಿದ್ದಲ್ಲಿ, ಹಾಗೆ ಪಡೆದುಕೊಳ್ಳುವುದಕ್ಕೊಳಪಟ್ಟು, ಹೊಂದಿರತಕ್ಕದ್ದು.

(4) ಹಾಗೆ ಸ್ಥಾಪಿತವಾದ ವಿಶ್ವವಿದ್ಯಾಲಯವು ಅದರಲ್ಲಿನ ಕುಲಾಧಿಪತಿಯವರು, ಕುಲಪತಿಯವರು, ಪ್ರಬಂಧಕ ಮಂಡಳಿಯ ಸದಸ್ಯರುಗಳು ಆಡಳಿತ ಮಂಡಳಿಯ ಹಾಗೂ ಪ್ರಶಿಕ್ಷಣ ಪರಿಷತ್ತಿನ ಸದಸ್ಯರುಗಳಾಗಿ ತತ್ಕಾಲದಲ್ಲಿ ಹುದ್ದೆಯನ್ನು ಹೊಂದಿರುವವರು ಇವರೆಲ್ಲರೂ ಕೂಡಿ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು. ಮತ್ತು ಅದು ವಿಶ್ವವಿದ್ಯಾಲಯದ ಹೆಸರಿನಲ್ಲಿ ದಾವೆ ಹೂಡಬಹುದು ಮತ್ತು ದಾವೆಗೊಳಗಾಗಬಹುದು.

(5) (2)ನೇ ಉಪ–ಪ್ರಕರಣದಡಿಯಲ್ಲಿ ವಿಶ್ವವಿದ್ಯಾಲಯವು ಸ್ಥಾಪನೆಯಾದ ಮೇಲೆ, ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ, ವಿಶ್ವವಿದ್ಯಾಲಯವು ಆರ್ಜಿಸಿದ, ರಚಿಸಿದ, ಏರ್ಪಾಟು ಮಾಡಿಕೊಂಡ ಅಥವಾ ಕಟ್ಟಲ್ಪಟ್ಟ ಭೂಮಿ ಮತ್ತಿತರ ಸ್ಥಿರ ಮತ್ತು ಚರ ಆಸ್ತಿಗಳು, ಅವು ಎಲ್ಲೇ ಇರಲಿ, ವಿಶ್ವವಿದ್ಯಾಲಯದಲ್ಲಿ ನಿಹಿತವಾಗಿರತಕ್ಕದ್ದು.

(6) ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

(7) ವಿಶ್ವವಿದ್ಯಾಲಯದಲ್ಲಿನ ಭೂಮಿ, ಕಟ್ಟಡ ಮತ್ತು ಇತರ ಆಸ್ತಿಗಳನ್ನು ಇತರ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

**5. ಅನುದಾನಗಳು ಮತ್ತು ಹಣಕಾಸು ನೆರವು.–** ವಿಶ್ವವಿದ್ಯಾಲಯವು ಸ್ವಂತ ಧನಮೂಲ ಉಳ್ಳದ್ದಾಗಿರತಕ್ಕದ್ದು ಮತ್ತು ರಾಜ್ಯದಿಂದ ಅಥವಾ ರಾಜ್ಯದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಇತರ ಸಂಸ್ಥೆ ಅಥವಾ

ನಿಗಮದಿಂದ ಯಾವುದೇ ನಿರ್ವಹಣಾ ಸಹಾಯ ಅನುದಾನ ಅಥವಾ ಯಾವುದೇ ಹಣಕಾಸು ನೆರವನ್ನು ಹಕ್ಕಿನಿಂದ ಕೇಳತಕ್ಕದ್ದಲ್ಲ ಅಥವಾ ಅದನ್ನು ಪಡೆಯಲು ಹಕ್ಕನ್ನು ಹೊಂದಿರತಕ್ಕದ್ದಲ್ಲ:

ಪರಂತು, ರಾಜ್ಯವು,–

(ಎ) ಇತರ ರಾಜ್ಯ ಸರ್ಕಾರದ ಸಂಘಟನೆಗಳಿಗೆ ಹಣಕಾಸು ನೆರವನ್ನು ಒದಗಿಸುತ್ತಿರುವಂಥದ್ದೇ ಸಂಶೋಧನೆ, ಅಭಿವೃದ್ಧಿ ಮತ್ತಿತರ ಚಟುವಟಿಕೆಗಳಿಗೆ; ಅಥವಾ

(ಬಿ) ರಾಜ್ಯ ಸರ್ಕಾರದ ನೆರವನ್ನು ಅವಲಂಬಿಸಿದ ಯಾವುದೇ ನಿರ್ದಿಷ್ಟ ಸಂಶೋಧನೆ ಅಥವಾ ಕಾರ್ಯಕ್ರಮಗಳಿಗಾಗಿ; ಮತ್ತು

(ಸಿ) ರಾಜ್ಯ ಕಾರ್ಯನೀತಿಯ ಬದಲಾವಣೆಗೆ ಒಳಪಟ್ಟು ಅಥವಾ ಅನ್ಯಥಾ ಇದೇ ಬಗೆಯ ವಿಶ್ವವಿದ್ಯಾಲಯಗಳಿಗೆ ಅಥವಾ ಅವುಗಳ ಪ್ರಯೋಜನಕ್ಕಾಗಿ ನೆರವು ಒದಗಿಸಿರುವ ಸಂದರ್ಭಗಳಲ್ಲಿ,

–ಅನುದಾನದ ಮೂಲಕ ಅಥವಾ ಅನ್ಯಥಾ ನೆರವು ನೀಡುವುದೂ ಒಳಗೊಂಡಂತೆ, ಹಣಕಾಸು ಬೆಂಬಲವನ್ನು ಒದಗಿಸಬಹುದು:

ಮತ್ತು ಪರಂತು, ವಿಶ್ವವಿದ್ಯಾಲಯವು, ಯಾವುದೇ ಇತರ ಮೂಲದಿಂದ ಯಾವುದೇ ಆರ್ಥಿಕ ನೆರವನ್ನು ಸ್ವೀಕರಿಸಬಹುದು.

**6. ಘಟಕ ಕಾಲೇಜನ್ನು ಸ್ಥಾಪಿಸುವುದಕ್ಕೆ ಅಧಿಕಾರ.**– ವಿಶ್ವವಿದ್ಯಾಲಯವು, ರಾಜ್ಯದಲ್ಲಿ ತನಗೆ ಸೂಕ್ತವೆನಿಸುವಂಥ ಸ್ಥಳಗಳಲ್ಲಿ ಘಟಕ ಕಾಲೇಜುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಹೊಂದಿರಬಹುದು.

**7. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.**– ವಿಶ್ವವಿದ್ಯಾಲಯವು, ತನ್ನ ಭವಿಷ್ಯದ್‌ದೃಷ್ಟಿ ಮತ್ತು ಧ್ಯೇಯೋದ್ದೇಶಗಳನ್ನು ಸಾಧಿಸಲು ವಿವಿಧ ಬಗೆಯ ಕಾರ್ಯತಂತ್ರಗಳನ್ನು ಈ ಮುಂದಿನಂತೆ ಕೈಗೊಳ್ಳಬಹುದು:–

(i) ಪ್ರಾಥಮಿಕ ಶಿಕ್ಷಣ, ಪ್ರೌಢ ಶಿಕ್ಷಣ, ಶಿಕ್ಷಣ ಆಡಳಿತ, ಶಿಕ್ಷಣ ಕಾರ್ಯನೀತಿ, ಹಣಕಾಸಿನ ಶಿಕ್ಷಣ, ಶಾಲಾಗುಣಮಟ್ಟದ ಚೌಕಟ್ಟುಗಳು, ಬೋಧನೆ–ಕಲಿಕೆ, ಬೋಧಕರ ಶಿಕ್ಷಣ, ಅಭಿವೃದ್ಧಿಯ ಇತರ ಸಂಬಂಧಪಟ್ಟ ಕ್ಷೇತ್ರಗಳನ್ನು ಒಳಗೊಂಡ ಶಿಕ್ಷಣದಲ್ಲಿನ ತಂತ್ರಜ್ಞಾನ ಮತ್ತು ವಿಜ್ಞಾನಗಳು, ಸಮಾಜ ವಿಜ್ಞಾನಗಳು, ಮಾನವಿಕ ವಿಜ್ಞಾನಗಳು ಮತ್ತು ಆಡಳಿತ ವಿಜ್ಞಾನ ಈ ರಂಗಗಳ ವಿವಿಧ ವಿಭಾಗಗಳಲ್ಲಿ ಶಿಕ್ಷಣ, ಬೋಧನೆ, ತರಬೇತಿ, ಸಂಶೋಧನೆ ಮತ್ತು ಅಭಿವೃದ್ಧಿಯನ್ನು ಒದಗಿಸುವುದು ಮತ್ತು ಈ ರಂಗಗಳಲ್ಲಿ ಸಂಶೋಧನೆ, ಜ್ಞಾನ ಸಂವರ್ಧನೆ ಹಾಗೂ ಪ್ರಸಾರಕ್ಕೆ ಏರ್ಪಾಡುಗಳನ್ನು ಮಾಡುವುದು;

(ii) ಬೋಧಕರಿಗೆ, ಬೋಧಕರಿಗೆ ಶಿಕ್ಷಣ ನೀಡುವವರಿಗೆ, ಉನ್ನತ ಶಿಕ್ಷಣ ಮತ್ತು ವೃತ್ತಿ ಶಿಕ್ಷಣಗಳಲ್ಲಿನ ಬೋಧಕರಿಗೆ, ಆಡಳಿತಗಾರರಿಗೆ ಮತ್ತು ಭಾರತದ ವಿವಿಧ ರಾಜ್ಯಗಳು ಮತ್ತು ವಿದೇಶಗಳಲ್ಲಿ ಶಿಕ್ಷಣ ಮತ್ತಿತರ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವಂಥ ಅಭಿವೃದ್ಧಿ ವೃತ್ತಿಗರಿಗಾಗಿ ಉನ್ನತ ಗುಣಮಟ್ಟದ ತರಬೇತಿ, ಸಾಮರ್ಥ್ಯ ನಿರ್ಮಾಣ ಪ್ರಕ್ರಿಯೆ ಮತ್ತು ಅಭಿವೃದ್ಧಿ ವ್ಯವಸ್ಥೆಗಳನ್ನು ವಿನ್ಯಾಸಗೊಳಿಸಿ ಒದಗಿಸುವುದು;

(iii) ಉತ್ತಮ ಗುಣಮಟ್ಟದ ಶಿಕ್ಷಣಕ್ಕೆ ತನ್ನ ಕೊಡುಗೆ ನೀಡುವುದಕ್ಕಾಗಿ ಭಾರತದ ವಿವಿಧ ರಾಜ್ಯಗಳಲ್ಲಿ ಮತ್ತು ವಿದೇಶಗಳಲ್ಲಿ ಸಂಪನ್ಮೂಲ ಕೇಂದ್ರಗಳನ್ನು ಅಭಿವೃದ್ಧಿ ಪಡಿಸುವುದು;

(iv) ಶೈಕ್ಷಣಿಕ ಬದಲಾವಣೆ ಮತ್ತು ಸಾಮಾಜಿಕ ಅಭಿವೃದ್ಧಿ ಹಾಗೂ ಮಾನವಾಭಿವೃದ್ಧಿ ಬಗ್ಗೆ ಅರಿವನ್ನುಂಟು ಮಾಡಲು ಮತ್ತು ಆ ಬಗ್ಗೆ ಕೊಡುಗೆ ನೀಡಲು ಭಾರತ ಮತ್ತಿತರ ರಾಷ್ಟ್ರಗಳಲ್ಲಿನ ವಿವಿಧ ಸ್ಥಳಗಳಲ್ಲಿ ಕ್ಯಾಂಪಸ್ಸುಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದು;

(v) ಭಾರತ ಮತ್ತು ವಿದೇಶಗಳ ಮಿಲಿಯಾಂತರ ಶಿಕ್ಷಕರು, ಶಿಕ್ಷಣ ಆಡಳಿತಗಾರರು ಮತ್ತು ಅಭಿವೃದ್ಧಿ ವೃತ್ತಿಗರನ್ನು ಸಂಪರ್ಕಿಸುವುದು ಸಾಧ್ಯವಾಗುವಂತೆ ಮುಂದುವರೆದ ಹಾಗೂ ದೂರ ಶಿಕ್ಷಣ ಕಾರ್ಯಕ್ರಮಗಳನ್ನು ಪ್ರಾರಂಭಿಸುವುದು;

(vi) ಮೌಲ್ಯಮಾಪನದ ವಿವಿಧ ಆಧುನಿಕ ವಿಧಾನಗಳ ಮೂಲಕ ಮಾಡಿದ ಮೌಲ್ಯಮಾಪನದಲ್ಲಿ ಉತ್ತೀರ್ಣರಾಗಿ ಶಿಕ್ಷಣವನ್ನು ಯಶಸ್ವಿಯಾಗಿ ಮುಗಿಸಿದವರಿಗೆ ನೀಡಲು ಪದವಿಗಳು, ಡಿಪ್ಲೋಮೋಗಳು, ಪ್ರಮಾಣಪತ್ರಗಳು ಮತ್ತು ಯಶೋಪತ್ರ ಪ್ರದಾನದಂಥ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರಾರಂಭಿಸುವುದು;

(vii) ವಿದ್ಯಾರ್ಥಿಗಳು, ಫ್ಯಾಕಲ್ಟಿ ಸದಸ್ಯರು ಮತ್ತಿತರರಿಗಾಗಿ ನಿರ್ದಿಷ್ಟ ಶೈಕ್ಷಣಿಕ ಮತ್ತು ಸಂಶೋಧನಾ ಕಾರ್ಯಕ್ರಮಗಳು, ತರಬೇತಿ ಕಾರ್ಯಕ್ರಮಗಳು ಮತ್ತು ವಿನಿಮಯ ಕಾರ್ಯಕ್ರಮಗಳನ್ನು ಪರಿಕಲ್ಪಿಸಿ, ವಿನ್ಯಾಸಗೊಳಿಸಿ, ಅಭಿವೃದ್ಧಿಪಡಿಸಿ ಒದಗಿಸಲು ಭಾರತ ಅಥವಾ ವಿದೇಶದ ಇತರ ಯಾವುದೇ ಕಾಲೇಜುಗಳು, ವಿಶ್ವವಿದ್ಯಾಲಯಗಳು ಸಂಶೋಧನಾ ಸಂಸ್ಥೆಗಳು, ಲಾಭರಹಿತ ಸಂಸ್ಥೆಗಳು, ಕೈಗಾರಿಕಾ ಸಂಸ್ಥೆಗಳು, ವೃತ್ತಿಪರ ಸಂಸ್ಥೆಗಳು ಅಥವಾ ಇತರ ಸಂಸ್ಥೆಗಳೊಂದಿಗೆ ಸಹಯೋಗವನ್ನು ಹೊಂದುವುದು;

(viii) ವಿಚಾರಗೋಷ್ಠಿಗಳು, ಸಮ್ಮೇಳನಗಳು, ಸಕ್ರಿಯ ಶೈಕ್ಷಣಿಕ ಕಾರ್ಯಕ್ರಮಗಳು, ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳು, ಪ್ರಕಟಣೆಗಳು ಹಾಗೂ ತರಬೇತಿ ಕಾರ್ಯಕ್ರಮಗಳು ಮತ್ತು ಇತರ ಕಾರ್ಯಕ್ರಮಗಳ ಮೂಲಕ, ಶಿಕ್ಷಣ ಮತ್ತು ಅದಕ್ಕೆ ಸಂಬಂಧಿಸಿದ ಅಭಿವೃದ್ಧಿ ಕ್ಷೇತ್ರಗಳ ವಿಚಾರಗಳನ್ನು ಕುರಿತು ಜ್ಞಾನ ಪ್ರಸಾರ ಮಾಡುವುದು ಹಾಗೂ ಸಾರ್ವಜನಿಕ ಚರ್ಚೆಯನ್ನು ಉತ್ತೇಜಿಸಿ ನಡೆಸಿಕೊಡುವುದು;

(ix) ರಾಜ್ಯ ಸರ್ಕಾರದ ಪೂರ್ವಾನುಮತಿಯೊಡನೆ, ವಿಶ್ವಾದ್ಯಂತ ಇರುವ ಉತ್ತಮ ಗುಣಮಟ್ಟದ ಇತರ ಯಾವುವೇ ಸಂಸ್ಥೆಗಳೊಂದಿಗೆ ಸಹಭಾಗಿಗಳಾಗಿ ವಿಶ್ವವಿದ್ಯಾಲಯದ ಬೋಧಕ ವೃಂದ (ಫ್ಯಾಕಲ್ಟಿ) ಮತ್ತು ಸಂಶೋಧಕರ ಅಭಿವೃದ್ಧಿ ಮತ್ತು ತರಬೇತಿಗಾಗಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದು;

(x) ರಾಜ್ಯ ಸರ್ಕಾರದ ಪೂರ್ವಾನುಮತಿಯೊಡನೆ, ಭಾರತದಲ್ಲಿನ ಅಥವಾ ವಿದೇಶದಲ್ಲಿನ ಯಾವುದೇ ಸಂಸ್ಥೆಯೊಂದಿಗೆ ಸಹಯೋಗ ಹೊಂದಿ ಸಂಶೋಧನೆ ಮತ್ತು ಅಭಿವಾದನೆಯನ್ನು ಕೈಗೊಳ್ಳುವುದು;

(xi) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಸಾಧಿಸಲು ಮತ್ತು ಉತ್ತೇಜಿಸಲು ಅವಶ್ಯವಾದ ಅಥವಾ ಸೂಕ್ತವಾದ ಕ್ರಮ ಕೈಗೊಳ್ಳುವುದು;

(xii) ಭಾರತದಲ್ಲಿನ ಶಿಕ್ಷಣ ಮತ್ತಿತರ ಅಭಿವೃದ್ಧಿ ವಲಯಗಳ ಪ್ರವರ್ಧನೆಗಾಗಿ ಸರ್ಕಾರದಿಂದ ಅನುಮೋದಿತವಾಗಬಹುದಾದ ಯಾವುದೇ ಧ್ಯೇಯೋದ್ದೇಶದ ಸಾಧನೆಗೆ ಶ್ರಮಿಸುವುದು.

**8. ವಿಶ್ವವಿದ್ಯಾಲಯದ ಅಧಿಕಾರಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಕಾರ್ಯಗಳನ್ನು ಮಾಡಲು ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಶಾಸನಗಳಲ್ಲಿ ಹೇಳಲಾದ ರೀತಿಯಲ್ಲಿ ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನಿರ್ಧರಿಸಬಹುದಾದಂಥ ಕ್ಯಾಂಪಸ್ಸುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಮತ್ತು ಅವುಗಳಿಗೆ ಮನ್ನಣೆ ನೀಡುವುದು;

(ii) ವಿಶ್ವವಿದ್ಯಾಲಯದ ಉದ್ದೇಶವನ್ನು ಕಾರ್ಯರೂಪಕ್ಕೆ ತರುವಲ್ಲಿ ಅಗತ್ಯವಾಗಬಹುದಾದಂಥ ಅಥವಾ ಕಾರ್ಯಸಾಧ್ಯವಾಗಬಹುದಾದಂಥ ಇತರ ಚಟುವಟಿಕೆಗಳನ್ನು ಕೈಗೊಳ್ಳುವುದು;

(iii) ಶಾಸನಗಳಲ್ಲಿ ಹೇಳಲಾದ ರೀತಿಯಲ್ಲಿ ಮತ್ತು ಷರತ್ತುಗಳಿಗೊಳಪಟ್ಟು ಪದವಿಗಳು ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನಮಾಡುವುದು;

(iv) ಶಾಸನಗಳನ್ವಯ ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿ ವೇತನಗಳು ಮತ್ತು ಬಹುಮಾನಗಳು, ಇತ್ಯಾದಿಗಳನ್ನು ಸ್ಥಾಪಿಸುವುದು ಮತ್ತು ನೀಡುವುದು;

(v) ಸಂದರ್ಭಾನುಸಾರ ಶಾಸನಗಳಲ್ಲಿ ಅಥವಾ ನಿಯಮಗಳಲ್ಲಿ ನಿಗದಿಪಡಿಸಬಹುದಾದಂಥ ಶುಲ್ಕಗಳು, ಬಿಲ್ಲುಗಳು, ಖರೀದಿ ಪಟ್ಟಿಗಳನ್ನು ಕೇಳಿಪಡೆದುಕೊಳ್ಳುವುದು ಮತ್ತು ಸ್ವೀಕರಿಸುವುದು ಹಾಗೂ ಚಾರ್ಜುಗಳನ್ನು ವಸೂಲು ಮಾಡುವುದು;

(vi) ವಿದ್ಯಾರ್ಥಿಗಳಿಗೆ ಮತ್ತು ಸಿಬ್ಬಂದಿಗಳಿಗೆ ಪಠ್ಯೇತರ ಚಟುವಟಿಕೆಗಳಿಗೆ ಅವಕಾಶಗಳನ್ನು ಕಲ್ಪಿಸುವುದು;

(vii) ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ, ಕ್ಯಾಂಪಸುಗಳ, ಪ್ರಾದೇಶಿಕ ಕೇಂದ್ರಗಳ, ಅಧ್ಯಯನ ಕೇಂದ್ರಗಳ ಫ್ಯಾಕಲ್ಟಿ, ಅಧಿಕಾರಿಗಳು ಮತ್ತು ಸಿಬ್ಬಂದಿಗಳನ್ನು ನೇಮಕ ಮಾಡಿಕೊಳ್ಳುವುದು;

(viii) ವಿಶ್ವವಿದ್ಯಾಲಯದ ಅಥವಾ ಒಂದು ಘಟಕ ಕಾಲೇಜಿನ ಅಥವಾ ಕ್ಯಾಂಪಸ್ಸಿನ, ಪ್ರಾದೇಶಿಕ ಕೇಂದ್ರದ, ಅಧ್ಯಯನ ಕೇಂದ್ರದ ಉದ್ದೇಶಕ್ಕಾಗಿ ಯಾವುದೇ ರೀತಿಯ ದೇಣಿಗೆಗಳು ಮತ್ತು ಕೊಡುಗೆಗಳನ್ನು ಸ್ವೀಕರಿಸುವುದು ಮತ್ತು ನ್ಯಾಸ ಮತ್ತು ದತ್ತಿ ಆಸ್ತಿಗಳೂ ಸೇರಿದಂತೆ, ಯಾವುದೇ ಚರ ಅಥವಾ ಸ್ಥಿರ ಆಸ್ತಿಯನ್ನು ಅರ್ಜಿಸುವುದು, ಹೊಂದಿರುವುದು, ನಿರ್ವಹಿಸುವುದು, ನಡೆಸುವುದು ಮತ್ತು ಹಸ್ತಾಂತರ ಮಾಡುವುದು;

(ix) ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸಿಕೊಂಡು ಬರುವುದು ಹಾಗೂ ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ ವಿದ್ಯಾರ್ಥಿಗಳಿಗೆ ವಸತಿ ಸ್ಥಳಗಳಾಗಿ ಮಾನ್ಯತೆ ನೀಡುವುದು;

(x) ವಸತಿಯ ಮೇಲ್ವಿಚಾರಣೆ ಮಾಡುವುದು ಮತ್ತು ನಿಯಂತ್ರಣ ಮಾಡುವುದು ಹಾಗೂ ವಿದ್ಯಾರ್ಥಿಗಳು ಮತ್ತು ಎಲ್ಲಾ ಪ್ರವರ್ಗಗಳ ಸಿಬ್ಬಂದಿಗಳಲ್ಲಿ ಶಿಸ್ತು ನಿಯಂತ್ರಣ ಮಾಡುವುದು ಮತ್ತು ವಿದ್ಯಾರ್ಥಿಗಳು ಮತ್ತು ಸಿಬ್ಬಂದಿಗಳಿಗೆ ನಡತೆ ಸಂಹಿತೆಯನ್ನು ರೂಪಿಸುವುದೂ ಒಳಗೊಂಡಂತೆ, ಅಂಥ ಸಿಬ್ಬಂದಿಗಳ ಸೇವಾಷರತ್ತುಗಳನ್ನು ನಿರೂಪಿಸುವುದು;

(xi) ಶೈಕ್ಷಣಿಕ, ಆಡಳಿತಾತ್ಮಕ ಮತ್ತು ಬೆಂಬಲ ಸಿಬ್ಬಂದಿಯ ಹುದ್ದೆಗಳನ್ನು ಮತ್ತು ಇತರ ಅವಶ್ಯ ಹುದ್ದೆಗಳನ್ನು ಸೃಜಿಸುವುದು;

(xii) ವಿಶ್ವವಿದ್ಯಾಲಯವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಇತರ ವಿಶ್ವವಿದ್ಯಾಲಯಗಳೊಡನೆ ಸಹಕರಿಸುವುದು ಮತ್ತು ಸಹಯೋಗ ಹೊಂದುವುದು;

(xiii) ದೂರ ಶಿಕ್ಷಣಕ್ಕೆ ಮತ್ತು ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ದೂರ ಶಿಕ್ಷಣವನ್ನು ಯಾವ ರೀತಿಯಲ್ಲಿ ಸಂಘಟಿಸಬಹುದು ಎಂಬುದಕ್ಕೆ ಉಪಬಂಧ ಕಲ್ಪಿಸುವುದು;

(xiv) ಶಿಕ್ಷಕರಿಗೆ, ಪಾಠಗಳನ್ನು ರಚಿಸುವವರಿಗೆ, ಮೌಲ್ಯಮಾಪಕರಿಗೆ ಮತ್ತಿತರ ಶೈಕ್ಷಣಿಕ ಸಿಬ್ಬಂದಿಗೆ ಪುನರ್ಮನನ ವ್ಯಾಸಂಗಕ್ರಮಗಳು, ಅಭಿಮುಖ ತರಬೇತಿ ಕಾರ್ಯಾಗಾರಗಳು, ವಿಚಾರಗೋಷ್ಠಿಗಳು ಮತ್ತಿತರ ಕಾರ್ಯಕ್ರಮಗಳನ್ನು ಏರ್ಪಡಿಸುವುದು ಮತ್ತು ನಡೆಸುವುದು;

(xv) ಪ್ರಶಿಕ್ಷಣ ಪರಿಷತ್ತಿನ ಅನುಮೋದನೆಯೊಂದಿಗೆ ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ, ಪ್ರಾದೇಶಿಕ ಕೇಂದ್ರಗಳ, ಅಧ್ಯಯನ ಕೇಂದ್ರಗಳಿಗೆ ಪ್ರವೇಶಕ್ಕೆ ಮಾನಕ ಗುಣಮಟ್ಟಗಳನ್ನು ನಿರ್ಧರಿಸುವುದು;

(xvi) ಆಡಳಿತ ಮಂಡಳಿ ಅನುಮೋದನೆಯೊಂದಿಗೆ ವಿಶ್ವವಿದ್ಯಾಲಯದಲ್ಲಿ ಅಥವಾ ಘಟಕ ಕಾಲೇಜು, ಪ್ರಾದೇಶಿಕ ಕೇಂದ್ರ ಅಥವಾ ಅಧ್ಯಯನ ಕೇಂದ್ರದಲ್ಲಿ ಯಾವುದೇ ವ್ಯಾಸಂಗಕ್ರಮಕ್ಕೆ ಪ್ರವೇಶ ಪಡೆಯಲು ರಾಜ್ಯದ ವಿದ್ಯಾರ್ಥಿಗಳಿಗೆ ವಿಶೇಷ ಉಪಬಂಧಗಳನ್ನು ಕಲ್ಪಿಸುವುದು;

(xvii) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಅವಶ್ಯವಾಗಬಹುದಾದಂಥ ಇತರ ಎಲ್ಲಾ ಕ್ರಮಗಳನ್ನು ಅಥವಾ ಕಾರ್ಯಗಳನ್ನು, ಅವು ಮೇಲೆ ಹೇಳಿದ ಅಧಿಕಾರಗಳಿಗೆ ಪ್ರಾಸಂಗಿಕವಾಗಿರಲಿ ಅಥವಾ ಇಲ್ಲದಿರಲಿ, ಕೈಗೊಳ್ಳುವುದು;

(xviii) ಪರೀಕ್ಷೆಗಳ ಆಧಾರದ ಮೇಲೆ ಅಥವಾ ಇತರ ಯಾವುದೇ ಮೌಲ್ಯಮಾಪನ ವಿಧಾನದ ಆಧಾರದ ಮೇಲೆ ನೀಡಲು ಪದವಿಗಳು, ಡಿಪ್ಲೋಮಾಗಳು, ಪ್ರಮಾಣಪತ್ರಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಸ್ಥಾಪಿಸುವುದು;

(xix) ಫಿಲಂಗಳು, ಕ್ಯಾಸೆಟ್‌ಗಳು, ಧ್ವನಿಸುರುಳಿಗಳು, ದೃಶ್ಯಸುರುಳಿಗಳು, ಸಿ.ಡಿ., ವಿ.ಸಿ.ಡಿ. ಮತ್ತಿತರ ತಂತ್ರಾಂಶಗಳೂ ಸೇರಿದಂತೆ ಬೋಧಕ ಸಾಮಗ್ರಿಗಳನ್ನು ತಯಾರಿಸುವುದಕ್ಕಾಗಿ ಅವಕಾಶ ಕಲ್ಪಿಸುವುದು;

(xx) ಇತರ ವಿಶ್ವವಿದ್ಯಾಲಯಗಳ, ಸಂಸ್ಥೆಗಳ ಅಥವಾ ಇತರ ಉನ್ನತ ವಿದ್ಯಾಭ್ಯಾಸದ ಸ್ಥಳಗಳ ಪರೀಕ್ಷೆಗಳು ಅಥವಾ ವ್ಯಾಸಂಗ ಅವಧಿಗಳನ್ನು (ಪೂರ್ಣವಾಗಿ ಅಥವಾ ಭಾಗಶ:) ವಿಶ್ವವಿದ್ಯಾಲಯದ ಪರೀಕ್ಷೆಗಳು ಅಥವಾ ವ್ಯಾಸಂಗ ಅವಧಿಗಳಿಗೆ ಸಮನೆಂದು ಮಾನ್ಯ ಮಾಡುವುದು ಮತ್ತು ಹಾಗೆ ನೀಡಿದ ಮಾನ್ಯತೆಗಳನ್ನು ಯಾವುದೇ ಸಮಯದಲ್ಲಿ ಹಿಂದಕ್ಕೆ ಪಡೆಯುವುದು;

(xxi) ಪ್ರಬಂಧಕ ಮಂಡಳಿಯ ಅನುಮೋದನೆಯೊಡನೆ ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ವಿಶ್ವವಿದ್ಯಾಲಯದ ಸ್ವತ್ತುಗಳನ್ನು ಭದ್ರತೆಯಾಗಿ ನೀಡಿ ಅಥವಾ ನೀಡದೆ ಹಣವನ್ನು ಪಡೆಯುವುದು, ಸಂಗ್ರಹಿಸುವುದು, ಚಂದಾದಾರರಾಗುವುದು ಮತ್ತು ಸಾಲ ಪಡೆಯುವುದು;

(xxii) ವಿಶ್ವವಿದ್ಯಾಲಯದ ಮೇಲಿನ ಉದ್ದೇಶಗಳಿಗೆ ಸಂಬಂಧಿಸಿದ ಅಥವಾ ಪ್ರಾಸಂಗಿಕವಾದ ಯಾವುದೇ ಇತರ ಚಟುವಟಿಕೆಗಳನ್ನು ಕೈಗೊಳ್ಳುವುದು.

**9. ವಿಶ್ವವಿದ್ಯಾಲಯವು ಎಲ್ಲಾ ವರ್ಗ, ಜಾತಿ, ಮತ ಮತ್ತು ಲಿಂಗಭೇದವಿಲ್ಲದೆ ಎಲ್ಲರಿಗೂ ಮುಕ್ತವಾಗಿರತಕ್ಕದ್ದು.–** ವಿಶ್ವವಿದ್ಯಾಲಯವು ವರ್ಗ, ಮತ ಅಥವಾ ಲಿಂಗಭೇದವಿಲ್ಲದೆ ಎಲ್ಲಾ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು:

ಪರಂತು, ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯಕ್ರಮಗಳಲ್ಲಿನ ಒಟ್ಟು ಸೀಟುಗಳ ಶೇಕಡ ಇಪ್ಪತ್ತೈದಕ್ಕಿಂತ ಕಡಿಮೆಯಿಲ್ಲದ ಸೀಟುಗಳಿಗೆ ಪ್ರವೇಶವನ್ನು ಕರ್ನಾಟಕ ರಾಜ್ಯದಲ್ಲಿ ಅಧಿವಾಸಿಗಳಾಗಿರುವ ವಿದ್ಯಾರ್ಥಿಗಳಿಗೆ, ಅವರು ಪ್ರವೇಶಕ್ಕೆ ಇರುವ ಮಾನದಂಡಗಳನ್ನು ಪೂರೈಸುವುದಕ್ಕೆ ಒಳಪಟ್ಟು, ಕಾಯ್ದಿರಿಸತಕ್ಕದ್ದು:

ಮತ್ತು ಪರಂತು, ಅಂಥ ವಿದ್ಯಾರ್ಥಿಗಳು ಸಾಕಷ್ಟು ಸಂಖ್ಯೆಯಲ್ಲಿ ಲಭ್ಯವಿಲ್ಲದಿದ್ದಾಗ ಹಾಗೆ ಕಾಯ್ದಿರಿಸಿದ ಸೀಟುಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿಮಾಡತಕ್ಕದ್ದು.

**10. ರಾಷ್ಟ್ರೀಯ ಅಧಿಮಾನ್ಯತೆ.–** ವಿಶ್ವವಿದ್ಯಾಲಯವು ಸಂಬಂಧಪಟ್ಟ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳಿಂದ ಅಧಿಮಾನ್ಯತೆಯನ್ನು ಕೋರತಕ್ಕದ್ದು.

**11. ಪ್ರಾಯೋಜಕ ಸಂಸ್ಥೆಯ ಅಧಿಕಾರಗಳು.–** ಪ್ರಾಯೋಜಕ ಸಂಸ್ಥೆಯು ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದಂತೆ ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಇವುಗಳಲ್ಲಿ ಪ್ರತಿಯೊಂದನ್ನು ಪ್ರಾಯೋಜಕ ಸಂಸ್ಥೆಯು ತನ್ನ ವಿವೇಚನಾನುಸಾರ ಚಲಾಯಿಸಬಹುದು, ಎಂದರೆ:–

(i) ಕುಲಾಧಿಪತಿಯವರನ್ನು ನೇಮಿಸುವುದು ಅಥವಾ ಪುನರ್‌ನೇಮಿಸುವುದು ಅಥವಾ ಅವರ ನೇಮಕಾತಿಯನ್ನು ಅಂತ್ಯಗೊಳಿಸುವುದು;

(ii) ವಿಶ್ವವಿದ್ಯಾಲಯದ ಪ್ರಥಮ ಪ್ರಬಂಧಕ ಮಂಡಳಿಯನ್ನು ರಚಿಸುವುದು;

(iii) ಪ್ರಬಂಧಕ ಮಂಡಳಿಯ ಅಧ್ಯಕ್ಷರನ್ನು ನಾಮನಿರ್ದೇಶಿಸುವುದು;

(iv) ಪ್ರಬಂಧಕ ಮಂಡಳಿಯ ಸದಸ್ಯರಾಗಿ ಮೂರು ವ್ಯಕ್ತಿಗಳನ್ನು ನಾಮನಿರ್ದೇಶಿಸುವುದು;

(v) ಆಡಳಿತ ಮಂಡಳಿಯ ಸದಸ್ಯರಾಗಿ ಇಬ್ಬರು ವ್ಯಕ್ತಿಗಳನ್ನು ನಾಮ ನಿರ್ದೇಶಿಸುವುದು;

(vi) ವಿಶ್ವವಿದ್ಯಾಲಯದ ದತ್ತಿ ನಿಧಿಗೆ ದೇಣಿಗೆ ನೀಡಲು ನಿಧಿ ಮೂಲಗಳನ್ನು ನಿರ್ಧರಿಸುವುದು;

(vii) ವಿಶ್ವವಿದ್ಯಾಲಯದ ಹಣದ ವಿನಿಯೋಗ ಮತ್ತು ವೆಚ್ಚ ಮಾಡುವುದನ್ನು ನಿರ್ಧರಿಸುವುದು;

(viii) ಈ ಅಧಿನಿಯಮದಲ್ಲಿ ಉಪಬಂಧಿಸಿರುವ ವಿಧಾನದಲ್ಲಿ ಪ್ರಬಂಧಕ ಮಂಡಳಿಯ ಸಭೆಯಲ್ಲಿಯ ವಿವಾದಗಳನ್ನು ಬಗೆಹರಿಸುವುದು;

## ಅಧ್ಯಾಯ – III

## ವಿಶ್ವವಿದ್ಯಾಲಯದ ಅಧಿಕಾರಿಗಳು

**12. ವಿಶ್ವವಿದ್ಯಾಲಯದ ಅಧಿಕಾರಿಗಳು.–** ಈ ಮುಂದಿನವರು ವಿಶ್ವವಿದ್ಯಾಲಯದ ಅಧಿಕಾರಿಗಳಾಗಿರತಕ್ಕದ್ದು, ಎಂದರೆ:–

(i) ಸಂದರ್ಶಕರು;

(ii) ಕುಲಾಧಿಪತಿಗಳು;

(iii) ಕುಲಪತಿಗಳು;

(iv) ಸಹಕುಲಪತಿಗಳು;

(v) ಕುಲಸಚಿವರು;

(vi) ಹಣಕಾಸು ಅಧಿಕಾರಿ; ಮತ್ತು

(vii) ಶಾಸನದ ಮೂಲಕ ವಿಶ್ವವಿದ್ಯಾಲಯದ ಅಧಿಕಾರಿಗಳೆಂದು ಘೋಷಿಸಬಹುದಾದಂಥ ಇತರ ಅಧಿಕಾರಿಗಳು.

**13. ಸಂದರ್ಶಕರು.–** (1) ಕರ್ನಾಟಕದ ರಾಜ್ಯಪಾಲರು ವಿಶ್ವವಿದ್ಯಾಲಯದ ಸಂದರ್ಶಕರಾಗಿರತಕ್ಕದ್ದು.

(2) ಸಂದರ್ಶಕರು ತಾವು ಹಾಜರಿದ್ದಾಗ ಪದವಿಗಳನ್ನು ಮತ್ತು ಡಿಪ್ಲೋಮಗಳನ್ನು ಪ್ರದಾನ ಮಾಡಲು ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಸಂದರ್ಶಕರು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಿಸಿದಂತೆ, ಯಾವುದೇ ಪತ್ರ ಅಥವಾ ಮಾಹಿತಿಯನ್ನು ತರಿಸಿಕೊಳ್ಳುವುದು.

(ii) ಸಂದರ್ಶಕರು, ತಾವು ಸ್ವೀಕರಿಸಿದ ಮಾಹಿತಿಯ ಆಧಾರದ ಮೇಲೆ ವಿಶ್ವವಿದ್ಯಾಲಯಗಳ ಯಾವುದೇ ಪ್ರಾಧಿಕಾರವು ಮಾಡಿದ ಯಾವುದೇ ಆದೇಶ, ನಡೆಸಿದ ವ್ಯವಹರಣೆಗಳು ಅಥವಾ ಕೈಗೊಂಡ ತೀರ್ಮಾನಗಳು ಈ ಅಧಿನಿಯಮ, ವಿನಿಯಮಗಳು, ಪರ್ಯಾದೇಶಗಳು ಅಥವಾ ನಿಯಮಗಳಿಗೆ ಪೂರಕವಾಗಿಲ್ಲವೆಂದು ಮನಗಂಡರೆ ಅವರು ವಿಶ್ವವಿದ್ಯಾಲಯದ ಹಿತಾಸಕ್ತಿಯಿಂದ ತಾವು ಸೂಕ್ತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ಹೊರಡಿಸಬಹುದು ಮತ್ತು ಹಾಗೆ ಹೊರಡಿಸಿದ ನಿರ್ದೇಶನಗಳನ್ನು ಸಂಬಂಧಪಟ್ಟವರೆಲ್ಲರೂ ಪಾಲಿಸತಕ್ಕದ್ದು.

**14. ಕುಲಾಧಿಪತಿಗಳು.–** (1) ಕುಲಾಧಿಪತಿಯವರನ್ನು ಪ್ರಾಯೋಜಕ ಸಂಸ್ಥೆಯು ನೇಮಿಸತಕ್ಕದ್ದು.

(2) ಪ್ರಾಯೋಜಕ ಸಂಸ್ಥೆಯ ಹಾಲಿ ಅಧ್ಯಕ್ಷರು ಮೊದಲನೇ ಕುಲಾಧಿಪತಿಗಳಾಗಿರತಕ್ಕದ್ದು, ಅವರು ತಮ್ಮ ಜೀವನಪರ್ಯಂತ ಕುಲಾಧಿಪತಿಗಳಾಗಿ ಪದಧಾರಣ ಮಾಡಿರತಕ್ಕದ್ದು.

(3) ತದನಂತರದ ಕುಲಾಧಿಪತಿಗಳು, ಅಂಥ ನೇಮಕಾತಿಯನ್ನು ಪರಿಗಣಿಸುವ ಸಂದರ್ಭದಲ್ಲಿ ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ, ಪ್ರಾಯೋಜಕ ಸಂಸ್ಥೆಯ ಅಧ್ಯಕ್ಷರಾಗಿರತಕ್ಕದ್ದು ಅಥವಾ ಪ್ರಾಯೋಜಕ ಸಂಸ್ಥೆಯ ನಿರ್ದೇಶಕರೂ ಸೇರಿದಂತೆ ಇತರ ವ್ಯಕ್ತಿಯಾಗಿರತಕ್ಕದ್ದು.

(4) ಹಾಗೆ ನೇಮಕಗೊಂಡ ತದನಂತರದ ಕುಲಾಧಿಪತಿಗಳು ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ ಪದಧಾರಣ ಮಾಡತಕ್ಕದ್ದು.

(5) ಕುಲಾಧಿಪತಿಗಳು ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಿದ ಶಾಸನಗಳ ಅಡಿಯಲ್ಲಿ ಅವರಿಗೆ ಪ್ರದಾನ ಮಾಡಬಹುದಾದಂಥ ಅಧಿಕಾರಗಳನ್ನು ಹೊಂದಿರತಕ್ಕದ್ದು, ಅವುಗಳಲ್ಲಿ ಈ ಮುಂದಿನ ಅಧಿಕಾರಗಳು ಒಳಗೊಂಡಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವುದು;

(ii) ಸಂದರ್ಶಕರ ಅನುಪಸ್ಥಿತಿಯಲ್ಲಿ ವಿಶ್ವವಿದ್ಯಾಲಯದ ಎಲ್ಲಾ ಘಟಿಕೋತ್ಸವಗಳಲ್ಲಿ ಅಧ್ಯಕ್ಷತೆಯನ್ನು ವಹಿಸುವುದು;

(iii) ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿಯ ಒಬ್ಬ ಸದಸ್ಯ ಮತ್ತು ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುವುದು ಹಾಗೂ ಆಡಳಿತ ಮಂಡಳಿಯ ಎಲ್ಲಾ ಸಭೆಗಳಲ್ಲಿ ಹಾಜರಾಗುವುದು;

(iv) ಈ ಅಧಿನಿಯಮ ಮತ್ತು ಶಾಸನಗಳ ಉಪಬಂಧಗಳಿಗೆ ಅನುಸಾರವಾಗಿ ಕುಲಪತಿಗಳನ್ನು ನೇಮಿಸುವುದು ಅಥವಾ ಪುನರ್ನೇಮಿಸುವುದು ಅಥವಾ ಅವರ ನೇಮಕಾತಿ ಅಂತ್ಯಗೊಳಿಸುವುದು;

(v) ಈ ಅಧಿನಿಯಮದ 15ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ನಾಮನಿರ್ದೇಶಕ ಸಮಿತಿಯ ಸದಸ್ಯರಾಗಿ ಒಬ್ಬ ವ್ಯಕ್ತಿಯನ್ನು ನಾಮನಿರ್ದೇಶನ ಮಾಡುವುದು;

(vi) ಸಹಕುಲಪತಿಗಳು, ಡೀನ್, ಕುಲಸಚಿವರು ಹಾಗೂ ಹಣಕಾಸು ಅಧಿಕಾರಿಗಳ ನೇಮಕಾತಿಯನ್ನು ಪೂರ್ವಾನುಮೋದಿಸುವುದು;

(vii) ಪ್ರಬಂಧಕ ಮಂಡಳಿಯ ಸದಸ್ಯರನ್ನಾಗಿ ಇಬ್ಬರು ಶಿಕ್ಷಣ ತಜ್ಞರನ್ನು ನಾಮನಿರ್ದೇಶಿಸುವುದು;

(viii) ಮೊದಲ ಸಹಕುಲಪತಿಗಳು ಮತ್ತು ಹಣಕಾಸು ಅಧಿಕಾರಿಗಳನ್ನು ನೇಮಿಸುವುದು;

(ix) ಮೊದಲ ಆಡಳಿತ ಮಂಡಳಿ, ಹಣಕಾಸು ಸಮಿತಿ, ಸಂಶೋಧನಾ ಪರಿಷತ್ತು, ದೂರ ಶಿಕ್ಷಣ ಸಮಿತಿ ಹಾಗೂ ಪ್ರಶಿಕ್ಷಣ ಪರಿಷತ್ತುಗಳನ್ನು ರಚಿಸುವುದು;

(x) ಈ ಅಧಿನಿಯಮದಲ್ಲಿ ಉಪಬಂಧಿಸಿದ ವಿಧಾನದಲ್ಲಿ ಕಾರ್ಯಸೂಚಿ ವಿಷಯಗಳನ್ನು ಪೂರ್ವಾನುಮೋದಿಸುವುದು;

(xi) ಈ ಅಧಿನಿಯಮದಲ್ಲಿ ಉಪಬಂಧಿಸಿದ ವಿಧಾನದಲ್ಲಿ (ಪ್ರಬಂಧಕ ಮಂಡಳಿಯ ಸಭೆಯಲ್ಲಿ ಉಂಟಾದ ಸಂಘರ್ಷಗಳನ್ನು ಹೊರತುಪಡಿಸಿ) ಸಂಘರ್ಷಗಳನ್ನು ಪರಿಹರಿಸುವುದು.

(6) ಪದಾಧಿಕಾರಿ ಅಥವಾ ಪದಾಧಿಕಾರಿಗಳು ಅಥವಾ ಸಂಸ್ಥೆ ಅಥವಾ ಸಂಸ್ಥೆಗಳು ಮತ್ತು ವಿಶ್ವವಿದ್ಯಾಲಯದ ಯಾವುದೇ ಇತರ ಪದಾಧಿಕಾರಿ ಅಥವಾ ಸಂಸ್ಥೆಗಳ ನಡುವೆ ಸಂಘರ್ಷಗಳು ಉಂಟಾದಲ್ಲಿ ಆಗ ಆ ವಿವಾದವನ್ನು ಕುಲಾಧಿಪತಿಯವರ ಪರ್ಯಾಲೋಚನೆಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿವಾದದ ಸಂದರ್ಭದಲ್ಲಿ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ವಿಶ್ವವಿದ್ಯಾಲಯವು ಬದ್ಧವಾಗಿರತಕ್ಕದ್ದು.

**15. ಕುಲಪತಿಗಳು.–** (1) (2)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ನಾಮನಿರ್ದೇಶಕ ಸಮಿತಿಯು ಶಿಫಾರಸ್ಸು ಮಾಡಿದ ಮೂರು ವ್ಯಕ್ತಿಗಳ ಪೈಕಿ ಒಬ್ಬರನ್ನು ಕುಲಪತಿಗಳಾಗಿ, ಶಾಸನಗಳಲ್ಲಿ ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಕುಲಾಧಿಪತಿಯವರು ನೇಮಿಸತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಹೇಳಿರುವ ನಾಮನಿರ್ದೇಶಕ ಸಮಿತಿಯಲ್ಲಿ ಈ ಮುಂದಿನ ವ್ಯಕ್ತಿಗಳು ಇರತಕ್ಕದ್ದು, ಎಂದರೆ.:–

(i) ಕುಲಾಧಿಪತಿಯವರು ನಾಮನಿರ್ದೇಶಿಸಿದ ಒಬ್ಬ ವ್ಯಕ್ತಿ;

(ii) ಪ್ರಬಂಧಕ ಮಂಡಳಿಯು ನಾಮ ನಿರ್ದೇಶಿಸಿದ ಇಬ್ಬರು ವ್ಯಕ್ತಿಗಳು, ಇವರಲ್ಲಿ ಒಬ್ಬರನ್ನು ಪ್ರಬಂಧಕ ಮಂಡಳಿಯು ಸಮಿತಿಯ ಸಂಚಾಲಕರೆಂದು ನಾಮನಿರ್ದೇಶಿಸತಕ್ಕದ್ದು.

(3) ನಾಮನಿರ್ದೇಶಕ ಸಮಿತಿಯು ಅರ್ಹತೆಯ ಆಧಾರದ ಮೇಲೆ ಕುಲಪತಿಯ ಹುದ್ದೆಗೆ ಸೂಕ್ತ ವ್ಯಕ್ತಿಗಳೆಂದು ಮೂರು ವ್ಯಕ್ತಿಗಳ ಹೆಸರನ್ನು ಶಿಫಾರಸ್ಸು ಮಾಡತಕ್ಕದ್ದು ಮತ್ತು ಅದನ್ನು ಪ್ರತಿಯೊಬ್ಬ ವ್ಯಕ್ತಿಯ ವಿದ್ಯಾರ್ಹತೆ ಮತ್ತಿತರ ವಿಶಿಷ್ಟ ಪ್ರಶಸ್ತಿಗಳನ್ನು ತಿಳಿಸುವ ಒಂದು ಸಂಕ್ಷಿಪ್ತ ವರದಿಯೊಂದಿಗೆ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು.

(4) ಕುಲಪತಿಯವರು ವಿಶ್ವವಿದ್ಯಾಲಯದ ಪ್ರಧಾನ ಕಾರ್ಯನಿರ್ವಾಹಕ ಮತ್ತು ಶೈಕ್ಷಣಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ವ್ಯವಹಾರಗಳ ಬಗ್ಗೆ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣವನ್ನು ಚಲಾಯಿಸತಕ್ಕದ್ದು ಹಾಗೂ ವಿಶ್ವವಿದ್ಯಾಲಯದ ಪ್ರಾಧಿಕಾರಗಳ ತೀರ್ಮಾನಗಳನ್ನು ಜಾರಿಗೊಳಿಸತಕ್ಕದ್ದು.

(5) ಶಿಕ್ಷಕರ ನೇಮಕಾತಿಯನ್ನು ಹೊರತುಪಡಿಸಿ ಕೂಡಲೇ ಕ್ರಮವನ್ನು ಕೈಗೊಳ್ಳಬೇಕಾದ ತುರ್ತು ಸ್ವರೂಪದ ಯಾವುದೇ ಇತರ ವಿಷಯಗಳಲ್ಲಿ ಮತ್ತು ಅದನ್ನು ಈ ಅಧಿನಿಯಮದ ಅಡಿಯಲ್ಲಿ ಅಥವಾ ವಿಶ್ವವಿದ್ಯಾಲಯವು ಇದಕ್ಕಾಗಿ ಅಧಿಕೃತಗೊಳಿಸಿದ್ದ ಯಾವೊಬ್ಬ ಅಧಿಕಾರಿ ಅಥವಾ ಪ್ರಾಧಿಕಾರ ಅಥವಾ ಇತರ ನಿಕಾಯವು ಕೂಡಲೇ ಕ್ರಮಕೈಗೊಳ್ಳುವುದು ಸಾಧ್ಯವಿರದಿರುವಾಗ ಕುಲಪತಿಯವರು ತಾನು ಸೂಕ್ತವೆಂದು ಭಾವಿಸಬಹುದಾದಂತಹ ಕ್ರಮವನ್ನು ಕುಲಾಧಿಪತಿಯವರ ಲಿಖಿತ ಪೂರ್ವಾನುಮೋದನೆಯನ್ನು ಪಡೆದು ಕೈಗೊಳ್ಳತಕ್ಕದ್ದು.

(6) ಕುಲಪತಿಯವರು ಶಾಸನಗಳು ಅಥವಾ ನಿಯಮಗಳಲ್ಲಿ ಹೇಳಲಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(7) ಕುಲಪತಿಯವರ ಸೇವೆಗಳನ್ನು ಪ್ರಬಂಧಕ ಮಂಡಳಿಯ ಅನುಮೋದನೆಯೊಂದಿಗೆ, ಕುಲಾಧಿಪತಿಯು ಸಹಜ ನ್ಯಾಯದ ತತ್ವಗಳನ್ನು ಅನುಸರಿಸಿದ ನಂತರ ಮತ್ತು ಶಿಸ್ತಿನ ಆಧಾರದ ಮೇಲೆ ಅಂತ್ಯಗೊಳಿಸುವ ಸಂದರ್ಭವೂ ಸೇರಿದಂತೆ ಪ್ರಕರಣದ ಬಗ್ಗೆ ಕುಲಪತಿಯು ತನ್ನ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡಿದ ತರುವಾಯ ಆತನ ಸೇವೆಯನ್ನು ಕುಲಾಧಿಪತಿಯವರು ಅಂತ್ಯಗೊಳಿಸಬಹುದು.

(8) ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಸಂದರ್ಶಕರು ಮತ್ತು ಕುಲಾಧಿಪತಿಯವರು ಇಬ್ಬರೂ ಹಾಜರಿರದ ಸಂದರ್ಭದಲ್ಲಿ ಕುಲಪತಿಯವರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**16. ಸಹಕುಲಪತಿಗಳು.–** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು ಮೂರು ಜನರನ್ನು ಮೀರದಂತೆ ಸಹಕುಲಪತಿಗಳನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ನೇಮಕಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**17. ವಿದ್ಯಾ ವಿಭಾಗಗಳ ಡೀನ್‌ಗಳು.–** ವಿದ್ಯಾ ವಿಭಾಗಗಳ ಡೀನ್‌ಗಳನ್ನು ಕುಲಪತಿಯವರು ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ನೇಮಕಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**18. ಕುಲಸಚಿವರು.–**(1) ಕುಲಪತಿಯವರು, ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ನಿಬಂಧನೆ ಮತ್ತು ಷರತ್ತುಗಳ ಮೇಲೆ ಕುಲಾಧಿಪತಿಯವರ ಲಿಖಿತ ಅನುಮೋದನೆಯೊಡನೆ ಕುಲಸಚಿವರನ್ನು ನೇಮಿಸತಕ್ಕದ್ದು.

(2) ಶಾಸನಗಳಲ್ಲಿ ಪರಿಭಾಷಿಸಿರುವಂಥ ಎಲ್ಲಾ ಕರಾರುಗಳನ್ನು ವಿಶ್ವವಿದ್ಯಾಲಯದ ಪರವಾಗಿ ಕುಲಸಚಿವರು ಮಾಡಿಕೊಳ್ಳತಕ್ಕದ್ದು ಮತ್ತು ಅದಕ್ಕೆ ಸಹಿ ಹಾಕತಕ್ಕದ್ದು.

(3) ಕುಲಸಚಿವರು ವಿಶ್ವವಿದ್ಯಾಲಯದ ಪರವಾಗಿ ದಾಖಲೆಗಳನ್ನು ಅಧಿಕೃತಗೊಳಿಸುವ ಅಧಿಕಾರವನ್ನು ಹೊಂದಿರತಕ್ಕದ್ದು ಹಾಗೂ ಕುಲಾಧಿಪತಿಯವರು ಮತ್ತು ಕುಲಪತಿಯವರು ಕಾಲದಿಂದ ಕಾಲಕ್ಕೆ ಅಗತ್ಯಪಡಿಸಬಹುದಾದಂಥ ಅಥವಾ ಶಾಸನಗಳಿಂದ ನಿಯಮಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(4) ಕುಲಸಚಿವರು ವಿಶ್ವವಿದ್ಯಾಲಯದ ದಾಖಲೆಗಳು ಮತ್ತು ಸಾಮಾನ್ಯ ಮೊಹರನ್ನು ಸರಿಯಾದ ರೀತಿಯಲ್ಲಿ ರಕ್ಷಿಸಿಕೊಂಡು ಬರುವ ಹೊಣೆಗಾರಿಕೆಯನ್ನು ಹೊಂದಿರತಕ್ಕದ್ದು ಮತ್ತು ಕುಲಾಧಿಪತಿಯವರು, ಕುಲಪತಿಯವರು ಅಥವಾ ಇತರ ಯಾವುದೇ ಪ್ರಾಧಿಕಾರವು ಕೋರಿದಂಥ ಎಲ್ಲಾ ಮಾಹಿತಿಯನ್ನು ಮತ್ತು ದಾಖಲೆಗಳನ್ನು ಅವರ ಮುಂದೆ ಮಂಡಿಸಲು ಬದ್ಧರಾಗಿತಕ್ಕದ್ದು.

**19. ಹಣಕಾಸು ಅಧಿಕಾರಿ.–** ಹಣಕಾಸು ಅಧಿಕಾರಿಯನ್ನು ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ನೇಮಕಗೊಳಿಸತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**20. ಇತರ ಅಧಿಕಾರಿಗಳು.–** ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ ನೇಮಕಾತಿಯ ವಿಧಾನ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಅಧಿಕಾರಗಳು ಮತ್ತು ಕರ್ತವ್ಯಗಳು ಶಾಸನಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

## ಅಧ್ಯಾಯ – IV

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**21. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** ಈ ಮುಂದಿನವುಗಳು ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು, ಎಂದರೆ:–

(i) ಪ್ರಬಂಧಕ ಮಂಡಳಿ;

(ii) ಆಡಳಿತ ಮಂಡಳಿ;

(iii) ಪ್ರಶಿಕ್ಷಣ ಪರಿಷತ್ತು;

(iv) ಸಂಶೋಧನಾ ಪರಿಷತ್ತು;

(v) ದೂರ ಶಿಕ್ಷಣ ಸಮಿತಿ;

(vi) ಹಣಕಾಸು ಸಮಿತಿ; ಮತ್ತು

(vii) ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಶಾಸನಗಳ ಮೂಲಕ ಘೋಷಿಸಬಹುದಾದಂತಹ ಇತರ ಪ್ರಾಧಿಕಾರಗಳು.

**22. ಪ್ರಬಂಧಕ ಮಂಡಳಿ ಮತ್ತು ಇದರ ಅಧಿಕಾರಗಳು.–** (1) ಪ್ರಬಂಧಕ ಮಂಡಳಿಯು ಈ ಮುಂದಿನವರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು – ಅಧ್ಯಕ್ಷರು;

(ii) ಕುಲಪತಿಯವರು – ಸದಸ್ಯರು;

(iii) ರಾಜ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ;

(iv) ರಾಜ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ;

(v) ವಿಶ್ವವಿದ್ಯಾಲಯ ಅನುದಾನ ಆಯೋಗದಿಂದ ನಾಮನಿರ್ದೇಶಿತರಾದ ಒಬ್ಬ ಖ್ಯಾತ ಶಿಕ್ಷಣ ತಜ್ಞ;

(vi) ಸಂದರ್ಶಕರು ಶಿಫಾರಸ್ಸು ಮಾಡಿದ ಹೆಸರುಗಳ ಪಟ್ಟಿಯಿಂದ, ಆದಷ್ಟೂ ಒಬ್ಬ ಮಹಿಳೆಗೇ ಆದ್ಯತೆ ನೀಡಿ, ಆಯ್ಕೆ ಮಾಡಿದ ಒಬ್ಬ ಖ್ಯಾತ ಶಿಕ್ಷಣ ತಜ್ಞರು ಮತ್ತು ವಿದ್ವಾಂಸರು;

(vii) ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶಿಸಿದ ಮೂರು ವ್ಯಕ್ತಿಗಳು;

(2) ಕುಲಸಚಿವರು ಮತ್ತು ಸಹ ಕುಲಪತಿಯವರು ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗೂ ಮತ ನೀಡಿಕೆ ಹಕ್ಕಿರದ ಆಹ್ವಾನಿತರಾಗಿರತಕ್ಕದ್ದು.

(3) ಪ್ರಬಂಧಕ ಮಂಡಳಿಯ ಸದಸ್ಯರ ಪದಾವಧಿ, ಸರ್ಕಾರದಿಂದ ನಾಮನಿರ್ದೇಶಿತರಾದ ಇಬ್ಬರು ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ನೇಮಕಾತಿ, ನವೀಕರಣ ಮತ್ತು ತೆಗೆದುಹಾಕುವುದು ಮುಂತಾದವುಗಳು ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

(4) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಲ್ಲಿ ಕುಲಾಧಿಪತಿಯವರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅವರ ಅನುಪಸ್ಥಿತಿಯಲ್ಲಿ ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶನ ಮಾಡಿದ ಯಾರಾದರೂ ಒಬ್ಬರು ಹಾಗೂ ಪ್ರಾಯೋಜಕ ಸಂಸ್ಥೆಯು ಯಾರನ್ನೂ ನಾಮನಿರ್ದೇಶನ ಮಾಡಿರದ ಸಂದರ್ಭದಲ್ಲಿ, ಕುಲಪತಿಯವರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(5) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಿಗೆ, ಅಂಥ ಸಭೆಯಲ್ಲಿ ಹಾಜರಾಗುವ ಮತ್ತು ಮತದಾನ ನೀಡುವ ಮೂರು ಜನ ಸದಸ್ಯರು ಗಣಪೂರ್ತಿ (ಕೋರಂ) ಆಗಿರತಕ್ಕದ್ದು:

ಪರಂತು, ಪ್ರಬಂಧಕ ಮಂಡಳಿಯ ಯಾವುದೇ ಸಭೆಯ ಕೋರಂ ಪೂರ್ಣವಾಗಬೇಕಾದರೆ ಕುಲಾಧಿಪತಿಯವರು ಅಥವಾ ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು ಹಾಜರಿರುವುದು ಮತ್ತು ಕುಲಾಧಿಪತಿಯವರು ಅಥವಾ ಪ್ರಾಯೋಜಕ ಸಂಸ್ಥೆಯ ನಾಮನಿರ್ದೇಶಿತರು ಹಾಜರಾಗದೇ ಇದ್ದಾಗ ಕುಲಪತಿಯವರು ಹಾಜರಿರುವುದು ಯಾವಾಗಲೂ ಅವಶ್ಯವಾಗಿರತಕ್ಕದ್ದು.

(6) ಒಂದು ಕಾರ್ಯಸೂಚಿ ವಿಷಯದ ಪರವಾಗಿ ಕುಲಾಧಿಪತಿಯವರು ತಮ್ಮ ಸಮ್ಮತಿ ಸೂಚಕ ಮತ ನೀಡಿದಾಗ ಅದಕ್ಕನುಸಾರವಾಗಿ ಹೊರತು, ಪ್ರಬಂಧಕ ಮಂಡಳಿಯು ತನ್ನ ಸಭೆಯಲ್ಲಿ ಯಾವುದೇ ಕಾರ್ಯಸೂಚಿ ವಿಷಯದ ಸಂಬಂಧದಲ್ಲಿ ಯಾವುದೇ ನಿರ್ಣಯವನ್ನು ಅಂಗೀಕರಿಸತಕ್ಕದ್ದಲ್ಲ ಅಥವಾ ತೀರ್ಮಾನವನ್ನು ತೆಗೆದುಕೊಳ್ಳತಕ್ಕದ್ದಲ್ಲ.

(7) ಪ್ರಬಂಧಕ ಮಂಡಳಿಯ ಸಭೆಯಲ್ಲಿ ಭಿನ್ನಾಭಿಪ್ರಾಯ ಉಂಟಾದಲ್ಲಿ ಆ ವಿಷಯವನ್ನು ತೀರ್ಮಾನಕ್ಕಾಗಿ ಪ್ರಾಯೋಜಕ ಸಂಸ್ಥೆಗೆ ಕಳುಹಿಸತಕ್ಕದ್ದು ಮತ್ತು ಸದರಿ ವಿಷಯದ ಬಗ್ಗೆ ಪ್ರಾಯೋಜಕ ಸಂಸ್ಥೆಯ ನಿರ್ಣಯವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ವಿಶ್ವವಿದ್ಯಾಲಯವು ಬದ್ಧವಾಗಿರತಕ್ಕದ್ದು.

(8) ಪ್ರಬಂಧಕ ಮಂಡಳಿಯು ವಿಶ್ವವಿದ್ಯಾಲಯದ ಪ್ರಧಾನ ಪ್ರಬಂಧಕ ಸಂಸ್ಥೆಯಾಗಿರತಕ್ಕದ್ದು ಮತ್ತು ಅದು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಶಾಸನಬದ್ಧ ಲೆಕ್ಕಪರಿಶೋಧಕರನ್ನು ನೇಮಕಗೊಳಿಸುವುದು;

(ii) ವಿಶ್ವವಿದ್ಯಾಲಯವು ಅನುಸರಿಸಬೇಕಾದ ಕಾರ್ಯನೀತಿಗಳನ್ನು ರಚಿಸುವುದು;

(iii) ಈ ಅಧಿನಿಯಮದ ಅಥವಾ ಶಾಸನಗಳ ಅಥವಾ ನಿಯಮಗಳ ಉಪಬಂಧಗಳಿಗೆ ಅನುಗುಣವಾಗಿ ಇರದ ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ತೀರ್ಮಾನಗಳನ್ನು ಪುನರೀಕ್ಷಿಸುವುದು;

(iv) ವಿಶ್ವವಿದ್ಯಾಲಯದ ಆಯವ್ಯಯ ಮತ್ತು ವಾರ್ಷಿಕ ವರದಿಗಳನ್ನು ಅನುಮೋದಿಸುವುದು;

(v) ಹೊಸ ಅಥವಾ ಹೆಚ್ಚುವರಿ ಶಾಸನಗಳನ್ನು ರಚಿಸುವುದು ಅಥವಾ ಈಗಾಗಲೇ ಇರುವ ಶಾಸನಗಳು ಮತ್ತು ನಿಯಮಗಳನ್ನು ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು;

(vi) ವಿಶ್ವವಿದ್ಯಾಲಯವನ್ನು ಸ್ವಯಂಸಮಾಪನಗೊಳಿಸುವ ನಿರ್ಧಾರವನ್ನು ತೆಗೆದುಕೊಳ್ಳುವುದು;

(vii) ಸರ್ಕಾರಕ್ಕೆ ಸಲ್ಲಿಸುವ ಪ್ರಸ್ತಾವಗಳನ್ನು ಅನುಮೋದಿಸುವುದು;

(viii) ವಿಶ್ವವಿದ್ಯಾಲಯದ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದಕ್ಕೆ ಅಪೇಕ್ಷಣೀಯವೆಂದು ಕಂಡುಬರುವಂಥ ತೀರ್ಮಾನಗಳನ್ನು ಮತ್ತು ಕ್ರಮಗಳನ್ನು ಕೈಗೊಳ್ಳುವುದು.

(9) ಪ್ರಬಂಧಕ ಮಂಡಳಿಯು ಶಾಸನಗಳಲ್ಲಿ ನಿಯಮಿಸಬಹುದಂಥ ಸಮಯ ಮತ್ತು ಸ್ಥಳದಲ್ಲಿ ಸಭೆ ಸೇರತಕ್ಕದ್ದು.

**23. ಆಡಳಿತ ಮಂಡಳಿ.–** (1) ಆಡಳಿತ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಗಳು;

(ii) ಸಹಕುಲಪತಿಗಳು;

(iii) ಕುಲಸಚಿವರು;

(iv) ಪ್ರಾಯೋಜಕ ಸಂಸ್ಥೆಯ ಇಬ್ಬರು ನಾಮನಿರ್ದೇಶಿತರು;

(v) ಕುಲಪತಿಗಳು ನಾಮನಿರ್ದೇಶಿಸಬಹುದಾದಂಥ ವಿದ್ಯಾವಿಭಾಗಗಳ ಇಬ್ಬರು ಡೀನ್‌ಗಳು;

(2) ಕುಲಪತಿಯವರು ಆಡಳಿತ ಮಂಡಳಿಯ ಅಧ್ಯಕ್ಷರಾಗಿರತಕ್ಕದ್ದು ಮತ್ತು ಕುಲಸಚಿವರು ಆಡಳಿತ ಮಂಡಳಿಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ಆಡಳಿತ ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು ಶಾಸನಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

(4) ಆಡಳಿತ ಮಂಡಳಿಯ ಎಲ್ಲಾ ಸಭೆಗಳಲ್ಲಿ ಕುಲಪತಿಯವರು ಅಧ್ಯಕ್ಷತೆ ವಹಿಸತಕ್ಕದ್ದು ಹಾಗೂ ಕುಲಪತಿಯವರ ಗೈರುಹಾಜರಿಯಲ್ಲಿ ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶನ ಮಾಡಿದವರು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಪ್ರಾಯೋಜಕ ಸಂಸ್ಥೆಯು ಯಾರನ್ನೂ ನಾಮನಿರ್ದೇಶನ ಮಾಡದೇ ಇದ್ದ ಸಂದರ್ಭದಲ್ಲಿ ಇತರ ಯಾವುದೇ ಸದಸ್ಯರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(5) ಆಡಳಿತ ಮಂಡಳಿಯ ಸಭೆಯಲ್ಲಿ ಯಾವುದೇ ವಿಷಯವನ್ನು ಕುರಿತು ಭಿನ್ನಾಭಿಪ್ರಾಯ ಉಂಟಾದಲ್ಲಿ ಸದರಿ ವಿಷಯವನ್ನು ಕುಲಾಧಿಪತಿಯವರಿಗೆ ತೀರ್ಮಾನಕ್ಕಾಗಿ ಕಳುಹಿಸತಕ್ಕದ್ದು ಮತ್ತು ಆ ವಿಷಯದ ಬಗ್ಗೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ವಿಶ್ವವಿದ್ಯಾಲಯವು ಬದ್ಧವಾಗಿರತಕ್ಕದ್ದು.

**24. ಪ್ರಶಿಕ್ಷಣ ಪರಿಷತ್ತು.–** (1) ಪ್ರಶಿಕ್ಷಣ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಯವರು – ಅಧ್ಯಕ್ಷರು

(ii) ಸಹಕುಲಪತಿಯವರು – ಸದಸ್ಯರು

(iii) ಕುಲಸಚಿವರು – ಕಾರ್ಯದರ್ಶಿಗಳು

(iv) ಶಾಸನಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಇತರ ಸದಸ್ಯರು.

(2) ಪ್ರಶಿಕ್ಷಣ ಪರಿಷತ್ತು ವಿಶ್ವವಿದ್ಯಾಲಯದ ಪ್ರಧಾನ ವಿದ್ಯಾ ವಿಷಯಕ ಸಂಸ್ಥೆಯಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳು, ಶಾಸನಗಳು, ವಿನಿಯಮಗಳು ಹಾಗೂ ನಿಯಮಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಬಗ್ಗೆ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**25. ಸಂಶೋಧನಾ ಪರಿಷತ್ತು.–** (1) ಸಂಶೋಧನಾ ಪರಿಷತ್ತು ವಿಶ್ವವಿದ್ಯಾಲಯದ ಪ್ರಧಾನ ಸಂಶೋಧನಾ ಸಮಿತಿಯಾಗಿರತಕ್ಕದ್ದು ಹಾಗೂ ಸಂಶೋಧನಾ ಕ್ಷೇತ್ರಗಳಲ್ಲಿ ಯಾವುದಕ್ಕೆ ಆದ್ಯತೆಯನ್ನು ನೀಡಲೇಬೇಕೆಂಬುದೂ ಒಳಗೊಂಡಂತೆ ವಿಶ್ವವಿದ್ಯಾಲಯವು ಯಾವ ರೀತಿಯ ಸಂಶೋಧನೆ ಕೈಗೊಳ್ಳಬೇಕೆಂಬ ಬಗ್ಗೆ ಒಂದು ವ್ಯಾಪಕವಾದ ಪರಿಪೂರ್ಣ ಭವಿಷ್ಯದ್ ದೃಷ್ಟಿಯನ್ನು ಒದಗಿಸತಕ್ಕದ್ದು. ಸಂಶೋಧನಾ ಪರಿಷತ್ತು ಈ ಅಧಿನಿಯಮದ ಉಪಬಂಧಗಳು, ಶಾಸನಗಳು, ವಿನಿಯಮಗಳು ಮತ್ತು ನಿಯಮಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ಸಂಶೋಧನಾ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

(2) ಸಂಶೋಧನಾ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಯವರು – ಅಧ್ಯಕ್ಷರು

(ii) ಸಹಕುಲಪತಿಯವರು – ಸದಸ್ಯರು

(iii) ಸಂಶೋಧನೆಯ ಡೀನ್ – ಕಾರ್ಯದರ್ಶಿಗಳು

(iv) ಎಲ್ಲಾ ವಿದ್ಯಾ ವಿಭಾಗದ ಡೀನ್‌ಗಳು – ಸದಸ್ಯರು

(v) ಶಾಸನಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಇತರ ಸದಸ್ಯರು.

**26. ದೂರ ಶಿಕ್ಷಣ ಸಮಿತಿ.–** (1) ದೂರ ಶಿಕ್ಷಣ ಸಮಿತಿಯು ವಿಶ್ವವಿದ್ಯಾಲಯದ ಪ್ರಧಾನ ಕ್ಯಾಂಪಸಿಗೆ ಆಗಮಿಸಬಹುದಾದ ಅಥವಾ ಆಗಮಿಸದೇ ಇರಬಹುದಾದ ಬಹುಸಂಖ್ಯಾತ ವಿದ್ಯಾ ಜಿಜ್ಞಾಸುಗಳಿಗೆ ಸಹವರ್ತಿ ಸಂಶೋಧನೆ ಕೆಲಸದ ಸಮೇತ ದೂರ ಶಿಕ್ಷಣವನ್ನು ಒದಗಿಸುವ ಪ್ರಧಾನ ಸಂಸ್ಥೆಯಾಗಿರತಕ್ಕದ್ದು. ದೂರ ಶಿಕ್ಷಣ ಸಮಿತಿಯು ಈ ಅಧಿನಿಯಮದ ಉಪಬಂಧಗಳು, ಶಾಸನಗಳು, ವಿನಿಯಮಗಳು ಮತ್ತು ನಿಯಮಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ದೂರ ಶಿಕ್ಷಣ ಯೋಜನೆಗಳು/ಕಾರ್ಯನೀತಿಗಳ ವಿಷಯಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

(2) ದೂರ ಶಿಕ್ಷಣ ಸಮಿತಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ :–

(i) ಕುಲಪತಿಯವರು – ಅಧ್ಯಕ್ಷರು

(ii) ಸಹಕುಲಪತಿಯವರು – ಸದಸ್ಯರು

(iii) ಕುಲಸಚಿವರು – ಕಾರ್ಯದರ್ಶಿ

(iv) ಶಾಸನಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಇತರ ಸದಸ್ಯರು.

**27. ಹಣಕಾಸು ಸಮಿತಿ.–** (1) ಹಣಕಾಸು ಸಮಿತಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು ಅಥವಾ ಅವರ ನಾಮನಿರ್ದೇಶಿತರು – ಅಧ್ಯಕ್ಷರು

(ii) ಕುಲಪತಿಯವರು – ಸದಸ್ಯರು

(iii) ಕುಲಸಚಿವರು – ಸದಸ್ಯರು

(iv) ಹಣಕಾಸು ಅಧಿಕಾರಿ – ಕಾರ್ಯದರ್ಶಿ

(v) ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು – ಸದಸ್ಯರು; ಮತ್ತು

(vi) ಶಾಸನಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಇತರ ಸದಸ್ಯರು.

(2) ಹಣಕಾಸು ಸಮಿತಿಯು ಹಣಕಾಸಿನ ವಿಷಯಗಳ ಜವಾಬ್ದಾರಿಯನ್ನು ಹೊಂದಿರುವ ವಿಶ್ವವಿದ್ಯಾಲಯದ ಪ್ರಧಾನ ಹಣಕಾಸು ಸಂಸ್ಥೆಯಾಗಿರತಕ್ಕದ್ದು ಹಾಗೂ ಅದು ಈ ಅಧಿನಿಯಮ, ನಿಯಮಗಳು ಮತ್ತು ಶಾಸನಗಳ ಉಪಬಂಧಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ಹಣಕಾಸು ವಿಷಯಗಳ ಸಮನ್ವಯಗೊಳಿಸತಕ್ಕದ್ದು ಮತ್ತು ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**28. ಇತರ ಪ್ರಾಧಿಕಾರಗಳು.–** ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ರಚನೆ, ಅಧಿಕಾರಗಳು ಹಾಗೂ ಪ್ರಕಾರ್ಯಗಳು ಶಾಸನಗಳಿಂದ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**29. ಖಾಲಿ ಸ್ಥಾನ ಇರುವ ಕಾರಣದಿಂದಾಗಿ ವ್ಯವಹರಣೆಗಳು ಅಸಿಂಧುವಾಗತಕ್ಕದ್ದಲ್ಲ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಕಾರ್ಯ ಅಥವಾ ವ್ಯವಹರಣೆಗಳು ಕೇವಲ ಅದರಲ್ಲಿ ಯಾವುದೇ ಖಾಲಿ ಸ್ಥಾನ ಇದೆ ಎಂಬ ಕಾರಣದಿಂದ ಅಥವಾ ಪ್ರಾಧಿಕಾರದ ರಚನೆಯಲ್ಲಿ ದೋಷವಿದೆ ಎಂಬ ಕಾರಣದಿಂದ ಅಸಿಂಧುವಾಗತಕ್ಕದ್ದಲ್ಲ.

**30. ಕಾರ್ಯಸೂಚಿ ವಿಷಯಗಳ ಬಗ್ಗೆ ಉಪಬಂಧಗಳು.–** (1) ಯಾವುವೇ ಕಾರ್ಯಸೂಚಿ ವಿಷಯಗಳನ್ನು ಕುಲಾಧಿಪತಿಯವರ ಲಿಖಿತ ಪೂರ್ವಾನುಮೋದನೆಯನ್ನು ಪಡೆಯದೇ ಪ್ರಬಂಧಕ ಮಂಡಳಿಯ ಅಥವಾ ಆಡಳಿತ ಮಂಡಳಿಯ ಅಥವಾ ಯಾವುದೇ ಸಮಿತಿಯ ಸಭೆಗಳ ಕಾರ್ಯಸೂಚಿ ವಿಷಯಗಳಲ್ಲಿ ಚರ್ಚೆಗಾಗಿ ಸೇರಿಸತಕ್ಕದ್ದಲ್ಲ ಅಥವಾ ಚರ್ಚೆಗೆ ತೆಗೆದುಕೊಳ್ಳತಕ್ಕದ್ದಲ್ಲ ಮತ್ತು ತೀರ್ಮಾನಿಸತಕ್ಕದ್ದಲ್ಲ.

(2) ಈ ಉಪಬಂಧವನ್ನು ಪಾಲಿಸದ ಯಾವುದೇ ಸಂದರ್ಭದಲ್ಲಿ ಕುಲಾಧಿಪತಿಯವರು ವಿಶ್ವವಿದ್ಯಾಲಯದ ಯಾವುದೇ ಪದಾಧಿಕಾರಿ ಅಥವಾ ಪದಾಧಿಕಾರಿಗಳು ಅಥವಾ ಸಂಸ್ಥೆ ಅಥವಾ ಸಂಸ್ಥೆಗಳು ಈ ಅಧಿನಿಯಮದ ಉಪಬಂಧಗಳನ್ನು ಪಾಲಿಸದೇ ತೆಗೆದುಕೊಂಡ ಎಲ್ಲಾ ತೀರ್ಮಾನಗಳನ್ನು ವಿಪರ್ಯಯಗೊಳಿಸುವ ಮೂಲಕ ಪರಿಹಾರ ಕ್ರಮಗಳನ್ನು ಕೂಡಲೇ ಕೈಗೊಳ್ಳಲು ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಹಾಗೆ ಪರಿಹಾರ ಕ್ರಮ ಕೈಗೊಂಡ ಮೇಲೆ ಅಧಿನಿಯಮದ ಉಪಬಂಧಗಳನ್ನು ಪಾಲಿಸದೇ ವಿಶ್ವವಿದ್ಯಾಲಯದ ಪದಾಧಿಕಾರಿ ಅಥವಾ ಪದಾಧಿಕಾರಿಗಳು ಅಥವಾ ಸಂಸ್ಥೆ ಅಥವಾ ಸಂಸ್ಥೆಗಳು ಕೈಗೊಂಡಿದ್ದ ಅಂಥ ಎಲ್ಲಾ ಕ್ರಮಗಳು, ಮೊದಲಿನಿಂದಲೂ ಶೂನ್ಯ ಮತ್ತು ಅಕೃತ ಎಂದು ಭಾವಿಸತಕ್ಕದ್ದು ಹಾಗೂ ತತ್ಪರಿಣಾಮವಾಗಿ, ಉಪಬಂಧ ಪಾಲಿಸದೇ ಇದ್ದ ವಿಷಯ ಅಥವಾ ನಿರ್ಧಾರದ ಸಂಬಂಧದಲ್ಲಿ ಅದಕ್ಕೆ ಮುಂಚೆ ಇದ್ದ ವಸ್ತುಸ್ಥಿತಿಯೇ ಮುಂದುವರಿಯತಕ್ಕದ್ದು.

## ಅಧ್ಯಾಯ – V

## ಶಾಸನಗಳು ಮತ್ತು ವಿನಿಯಮಗಳು

**31. ಶಾಸನಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಶಾಸನಗಳು ವಿಶ್ವವಿದ್ಯಾಲಯಕ್ಕೆ ಹಾಗೂ ಸಿಬ್ಬಂದಿಗೆ ಸಂಬಂಧಪಟ್ಟ ಯಾವುವೇ ವಿಷಯಗಳಿಗೆ ಸಂಬಂಧಪಟ್ಟಂತೆ ಈ ಮುಂದಿನಂತೆ ಉಪಬಂಧ ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಕಾರ್ಯಕಲಾಪಗಳನ್ನು ನಡೆಸುವ ಮತ್ತು ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸದಿರುವ ಸಂಸ್ಥೆಗಳ ರಚನೆಯ ಕಾರ್ಯವಿಧಾನ;

(ii) ಶಾಶ್ವತ ಶಾಸನಬದ್ಧ ದತ್ತಿ ನಿಧಿ, ವಿಶ್ವವಿದ್ಯಾಲಯ ದತ್ತಿ ನಿಧಿ, ಸಾಮಾನ್ಯ ನಿಧಿ ಹಾಗೂ ಅಭಿವೃದ್ಧಿ ನಿಧಿಗಳ ನಿರ್ವಹಣೆ;

(iii) ಕುಲಪತಿಗಳು, ಕುಲಸಚಿವರು ಹಾಗೂ ಹಣಕಾಸು ಅಧಿಕಾರಿ ಇವರ ನೇಮಕಾತಿಯ ನಿಬಂಧನೆಗಳು ಹಾಗೂ ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಪ್ರಕಾರ್ಯಗಳು;

(iv) ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ, ಶಿಕ್ಷಕರ ಮತ್ತು ನೌಕರರ ನೇಮಕಾತಿ ವಿಧಾನ ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(v) ವಿಶ್ವವಿದ್ಯಾಲಯ ಹಾಗೂ ಅದರ ಅಧಿಕಾರಿಗಳು, ವಿದ್ಯಾವಿಭಾಗದ (ಫ್ಯಾಕಲ್ಟಿ) ಸದಸ್ಯರು, ನೌಕರರು ಹಾಗೂ ವಿದ್ಯಾರ್ಥಿಗಳ ನಡುವೆ ಉಂಟಾದ ವಿವಾದಗಳನ್ನು ಪರಿಹರಿಸುವ ವಿಧಾನ;

(vi) ವಿಭಾಗಗಳು ಮತ್ತು ವಿದ್ಯಾವಿಭಾಗಗಳ (ಫ್ಯಾಕಲ್ಟಿಗಳ) ಸೃಜನೆ, ರದ್ಧತಿ ಅಥವಾ ಪುನಾರಚನೆ;

(vii) ಇತರ ವಿಶ್ವವಿದ್ಯಾಲಯಗಳು ಅಥವಾ ಉನ್ನತ ಶಿಕ್ಷಣ ಸಂಸ್ಥೆಗಳ ಜೊತೆಯಲ್ಲಿ ಸಹಕರಿಸಬೇಕಾದ ರೀತಿ;

(viii) ಗೌರವ ಪದವಿಗಳ ನೀಡಿಕೆಯ ಕಾರ್ಯವಿಧಾನ;

(ix) ಉಚಿತ ಶಿಕ್ಷಣ ಮತ್ತು ವಿದ್ಯಾರ್ಥಿವೇತನ ಮಂಜೂರಾತಿಗೆ ಸಂಬಂಧಿಸಿದ ಉಪಬಂಧಗಳು;

(x) ವಿವಿಧ ವ್ಯಾಸಂಗ ಕ್ರಮಗಳಲ್ಲಿನ ಸೀಟುಗಳ ಸಂಖ್ಯೆ ಮತ್ತು ಅಂಥ ವ್ಯಾಸಂಗ ಕ್ರಮಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಕಾರ್ಯವಿಧಾನ;

(xi) ವಿವಿಧ ವ್ಯಾಸಂಗ ಕ್ರಮಗಳಿಗೆ ವಿದ್ಯಾರ್ಥಿಗಳಿಗೆ ವಿಧಿಸಬಹುದಾದ ಶುಲ್ಕ;

(xii) ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಉಚಿತ ಶಿಕ್ಷಣ, ಪದಕಗಳು ಹಾಗೂ ಬಹುಮಾನಗಳನ್ನು ಪ್ರಾರಂಭಿಸುವುದು;

(xiii) ಹುದ್ದೆಗಳ ಸೃಜನೆ ಮತ್ತು ರದ್ಧತಿಯ ಕಾರ್ಯವಿಧಾನ;

(xiv) ನಿರ್ದಿಷ್ಟಪಡಿಸಬಹುದಾದ ಇತರ ವಿಷಯಗಳು.

**32. ಶಾಸನಗಳ ರಚನೆ ವಿಧಾನ.–** (1) ಆಡಳಿತ ಮಂಡಳಿಯು ರಚಿಸಿದ ಮೊದಲ ಶಾಸನಗಳನ್ನು ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ಆಡಳಿತ ಮಂಡಳಿಯು ಸಲ್ಲಿಸಿದ ಮೊದಲ ಶಾಸನಗಳನ್ನು ಪ್ರಬಂಧಕ ಮಂಡಳಿಯು ಪರಿಗಣಿಸತಕ್ಕದ್ದು ಹಾಗೂ ತಾನು ಅವಶ್ಯವೆಂದು ಭಾವಿಸಬಹುದಾಂಥ ಮಾರ್ಪಾಡುಗಳು, ಯಾವುದಾದರು ಇದ್ದಲ್ಲಿ, ಅವುಗಳೊಡನೆ ತನ್ನ ಅನುಮೋದನೆಯನ್ನು ನೀಡತಕ್ಕದ್ದು.

(3) ಪ್ರಬಂಧಕ ಮಂಡಳಿಯು ಶಾಸನಗಳ ಅನುಮೋದನೆಯ ವಿಷಯದಲ್ಲಿ ಮೂವತ್ತು ದಿನಗಳ ಒಳಗೇ ಯಾವುದೇ ತೀರ್ಮಾನವನ್ನು ಕೈಗೊಳ್ಳಲು ತಪ್ಪಿದಲ್ಲಿ ಅದನ್ನು ಪ್ರಬಂಧಕ ಮಂಡಳಿಯು ಅನುಮೋದಿಸಿದೆ ಎಂದು ಭಾವಿಸತಕ್ಕದ್ದು.

(4) ವಿಶ್ವವಿದ್ಯಾಲಯವು, ಪ್ರಬಂಧಕ ಮಂಡಳಿಯು ಅನುಮೋದಿಸಿದ ಮೊದಲ ಶಾಸನಗಳನ್ನು ವಿಶ್ವವಿದ್ಯಾಲಯದ ಅಧಿಸೂಚನೆಯಲ್ಲಿ ಪ್ರಕಟಿಸತಕ್ಕದ್ದು ಮತ್ತು ತದನಂತರ ಮೊದಲ ಶಾಸನವು ಅದರ ಪ್ರಕಟಣೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**33. ಶಾಸನಗಳ ತಿದ್ದುಪಡಿಯ ಅಧಿಕಾರ.–** ಪ್ರಬಂಧಕ ಮಂಡಳಿಯು ಹೊಸ ಅಥವಾ ಹೆಚ್ಚಿನ ಶಾಸನಗಳನ್ನು ರಚಿಸಬಹುದು ಅಥವಾ ಶಾಸನಗಳ ತಿದ್ದುಪಡಿ ಮಾಡಬಹುದು ಅಥವಾ ಅವನ್ನು ನಿರಸನಗೊಳಿಸಬಹುದು.

**34. ವಿನಿಯಮಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ವಿನಿಯಮಗಳು ಈ ಮುಂದಿನ ಯಾವುದೇ ಅಥವಾ ಎಲ್ಲಾ ವಿಷಯಗಳಿಗೆ ಉಪಬಂಧಗಳನ್ನು ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ ಮತ್ತು ವಿದ್ಯಾರ್ಥಿ ಪಟ್ಟಿಯಲ್ಲಿ ಅವರುಗಳ ದಾಖಲಾತಿ ಹಾಗೂ ಮುಂದುವರಿಕೆ;

(ii) ವಿಶ್ವವಿದ್ಯಾಲಯದ ಎಲ್ಲಾ ಪದವಿಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ನಿಗದಿಪಡಿಸತಕ್ಕ ವ್ಯಾಸಂಗ ಕ್ರಮಗಳು;

(iii) ಪದವಿಗಳ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳ ಪ್ರದಾನ;

(iv) ಸಂಶೋಧನಾ ವೇತನ (ಫೆಲೋಶಿಪ್), ವಿದ್ಯಾರ್ಥಿವೇತನ, ಶಿಷ್ಯವೇತನ, ಪದಕಗಳು ಮತ್ತು ಬಹುಮಾನಗಳನ್ನು ನೀಡಲು ಷರತ್ತುಗಳು;

(v) ಪರೀಕ್ಷೆಗಳನ್ನು ನಡೆಸುವುದು ಹಾಗೂ ಪರೀಕ್ಷೆ ನಡೆಸುವ ಸಂಸ್ಥೆಗಳು, ಪರೀಕ್ಷಕರು, ಪರೀಕ್ಷಾ ಮೇಲ್ವಿಚಾರಕರು, ಟ್ಯಾಬುಲೇಟರ್‌ಗಳು ಮತ್ತು ಮಾಡರೇಟರ್‌ಗಳ ನೇಮಕಾತಿಯ ವಿಧಾನ ಮತ್ತು ನೇಮಕಾತಿ ಷರತ್ತುಗಳು;

(vi) ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ, ಪದವಿಗಳಿಗೆ ಹಾಗೂ ಇತರ ಶೈಕ್ಷಣಿಕ ಪ್ರಶಸ್ತಿಗಳಿಗೆ ಪ್ರವೇಶಕ್ಕೆ ವಿಧಿಸತಕ್ಕ ಶುಲ್ಕ;

(vii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನಲ್ಲಿ ವಿದ್ಯಾರ್ಥಿಗಳ ನಿವಾಸಕ್ಕಾಗಿ ಷರತ್ತುಗಳು;

(viii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಶಿಸ್ತು ಪಾಲನೆ;

(ix) ಈ ಅಧಿನಿಯಮದ ಅಡಿಯಲ್ಲಿನ ಶಾಸನಗಳಲ್ಲಿ ಉಪಬಂಧಿಸಬಹುದಾಂಥ ಇತರ ಎಲ್ಲಾ ವಿಷಯಗಳು.

**35. ವಿನಿಯಮಗಳ ರಚನೆ ವಿಧಾನ.–** ವಿನಿಯಮಗಳನ್ನು ಪ್ರಶಿಕ್ಷಣ ಪರಿಷತ್ತು ರಚಿಸತಕ್ಕದ್ದು ಹಾಗೂ ಆಡಳಿತ ಮಂಡಳಿಯು ಅನುಮೋದಿಸತಕ್ಕದ್ದು.

**36. ವಿನಿಯಮಗಳ ತಿದ್ದುಪಡಿಗೆ ಅಧಿಕಾರ.–** ಪ್ರಶಿಕ್ಷಣ ಪರಿಷತ್ತು ಆಡಳಿತ ಮಂಡಳಿಯ ವಿನಿಯಮ ಅನುಮೋದನೆಯೊಡನೆ ಹೊಸ ವಿನಿಯಮಗಳನ್ನು ಅಥವಾ ಹೆಚ್ಚುವರಿ ವಿನಿಯಮಗಳನ್ನು ರಚಿಸಬಹುದು ಅಥವಾ ವಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

**37. ಶುಲ್ಕ ನಿಯಂತ್ರಣ ಸಮಿತಿ.–** (1) ಪ್ರಬಂಧಕ ಮಂಡಳಿಯು ರಚಿಸಿದ ಒಂದು ಶುಲ್ಕ ನಿಯಂತ್ರಣ ಸಮಿತಿಯು ಇರತಕ್ಕದ್ದು, ಇದರಲ್ಲಿ ಉನ್ನತ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ಅಥವಾ ಅವರ ನಾಮನಿರ್ದೇಶಿತರು ಒಬ್ಬ ಸದಸ್ಯರಾಗಿರತಕ್ಕದ್ದು ಮತ್ತು ಕುಲಾಧಿಪತಿಯವರು ಸಮಿತಿಯ ಅಧ್ಯಕ್ಷರಾಗಿರತಕ್ಕದ್ದು ಹಾಗೂ ಅಧ್ಯಕ್ಷರು ನಾಮನಿರ್ದೇಶಿಸಿದ ಇತರ ಮೂರು ಜನ ಸದಸ್ಯರು ಇರತಕ್ಕದ್ದು.

(2) ಸಮಿತಿಯು ಎಲ್ಲಾ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಶುಲ್ಕದ ಸ್ವರೂಪವನ್ನು ನಿಗದಿಪಡಿಸುವುದಕ್ಕಾಗಿ ಶಾಸನಗಳಿಗೆ ಸುಸಂಗತವಾದ ಕಾರ್ಯ ವಿಧಾನ ಮತ್ತು ಪದ್ಧತಿಗಳನ್ನು ರೂಪಿಸತಕ್ಕದ್ದು.

(3) ಸಮಿತಿಯು ಹಾಗೆ ಪ್ರಸ್ತಾಪಿಸಿದ ಶುಲ್ಕದ ಸ್ವರೂಪವನ್ನು ಪ್ರಬಂಧಕ ಮಂಡಳಿಯ ಮುಂದೆ ಅದರ ಒಪ್ಪಿಗೆಗಾಗಿ ಮಂಡಿಸತಕ್ಕದ್ದು.

## ಅಧ್ಯಾಯ – VI

## ಸಂಕೀರ್ಣ

**38. ನೌಕರರ ಸೇವಾ ಷರತ್ತುಗಳು.–** (1) ಪ್ರತಿಯೊಬ್ಬ ನೌಕರನು ಲಿಖಿತ ಕರಾರನ್ನು ಬರೆದುಕೊಟ್ಟು ನೇಮಕಗೊಳ್ಳತಕ್ಕದ್ದು ಮತ್ತು ಅದನ್ನು ವಿಶ್ವವಿದ್ಯಾಲಯದಲ್ಲಿ ಇಟ್ಟುಕೊಳ್ಳತಕ್ಕದ್ದು ಹಾಗೂ ಅದರ ಪ್ರತಿಯನ್ನು ಸಂಬಂಧಪಟ್ಟ ನೌಕರನಿಗೆ ನೀಡತಕ್ಕದ್ದು.

(2) ನೌಕರರ ವಿರುದ್ಧ ಶಿಸ್ತು ಕ್ರಮವನ್ನು ಶಾಸನಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಕಾರ್ಯವಿಧಾನಗಳ ಅನುಸಾರವಾಗಿ ತೆಗೆದುಕೊಳ್ಳತಕ್ಕದ್ದು.

(3) ವಿಶ್ವವಿದ್ಯಾಲಯ ಮತ್ತು ನೌಕರನ ಮಧ್ಯದಲ್ಲಿಯ ಕರಾರನಿಂದ ಉದ್ಭವಿಸಬಹುದಾದ ಯಾವುದೇ ವಿವಾದವನ್ನು ಆ ಲಿಖಿತ ಕರಾರಿನಲ್ಲಿ ಉಪಬಂಧಿಸಿದ ವಿಧಾನದಲ್ಲಿ ಹಾಗೂ ಶಾಸನಗಳ ಅನುಸಾರವಾಗಿ ಪರಿಹರಿಸತಕ್ಕದ್ದು.

**39. ಮೇಲ್ಮನವಿ ಹಕ್ಕು.–** ವಿಶ್ವವಿದ್ಯಾಲಯವು ತನ್ನ ನೌಕರರ ಅಥವಾ ವಿದ್ಯಾರ್ಥಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಂಡ ಸಂದರ್ಭದಲ್ಲಿ ಬಾಧಿತ ನೌಕರ ಅಥವಾ ವಿದ್ಯಾರ್ಥಿಯು ಶಾಸನಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಮೇಲ್ಮನವಿ ಹಕ್ಕು ಹೊಂದಿರತಕ್ಕದ್ದು.

**40. ಭವಿಷ್ಯ ನಿಧಿ ಮತ್ತು ನಿವೃತ್ತಿ ವೇತನ.–** ವಿಶ್ವವಿದ್ಯಾಲಯವು ತನ್ನ ನೌಕರರ ಪ್ರಯೋಜನಕ್ಕಾಗಿ ಶಾಸನಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ತಾನು ಸೂಕ್ತವೆಂದು ಭಾವಿಸಬಹುದಾದಂಥ ಭವಿಷ್ಯ ನಿಧಿ ಅಥವಾ ನಿವೃತ್ತಿ ವೇತನ ನಿಧಿಗಳನ್ನು ರಚಿಸತಕ್ಕದ್ದು ಹಾಗೂ ಅಂಥ ವಿಮಾ ಯೋಜನೆಗಳನ್ನು ಒದಗಿಸತಕ್ಕದ್ದು.

**41. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ಸಂಸ್ಥೆಗಳ ರಚನೆಯ ವಿವಾದಗಳು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ಸಂಸ್ಥೆಯ ಸದಸ್ಯನಾಗಿ ಯಾವೊಬ್ಬ ವ್ಯಕ್ತಿಯು ಸೂಕ್ತವಾಗಿ ಆಯ್ಕೆಯಾಗಿದ್ದಾನೆಯೇ ಅಥವಾ ನೇಮಕಗೊಂಡಿದ್ದಾನೆಯೇ ಅಥವಾ ಅದಕ್ಕೆ ಅರ್ಹನಾಗಿದ್ದಾನೆಯೇ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದರೆ ಆ ವಿಷಯವನ್ನು ತೀರ್ಮಾನಕ್ಕಾಗಿ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**42. ಸಮಿತಿಗಳ ರಚನೆ.–** 21ನೇ ಪ್ರಕರಣದಲ್ಲಿ ನಮೂದಿಸಿದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ತಾನು ಸೂಕ್ತವೆಂದು ಭಾವಿಸಬಹುದಾದಂಥ ಆ ಪ್ರಾಧಿಕಾರದ ಸದಸ್ಯರನ್ನು ಒಳಗೊಂಡಂಥ ಪ್ರಾಧಿಕಾರದ ಒಂದು ಸಮಿತಿಯನ್ನು ರಚಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**43. ಆಕಸ್ಮಿಕವಾಗಿ ಖಾಲಿಯಾದ ಸ್ಥಾನಗಳನ್ನು ತುಂಬುವುದು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಂಸ್ಥೆಯ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ಪೈಕಿ ಯಾವುದೇ ಸ್ಥಾನವು ಆಕಸ್ಮಿಕವಾಗಿ ಖಾಲಿಯಾದರೆ ಯಾರ ಸ್ಥಾನವು ಖಾಲಿಯಾಗಿ ತುಂಬಬೇಕಾಗಿ ಬಂದಿದೆಯೋ ಆ ಸದಸ್ಯನನ್ನು ಯಾವ ರೀತಿಯಲ್ಲಿ ಆರಿಸಲಾಗಿತ್ತೋ ಅದೇ ರೀತಿಯಲ್ಲಿ ಹೊಸ ಸದಸ್ಯನನ್ನು ಆರಿಸಿ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ಖಾಲಿ ಸ್ಥಾನವನ್ನು ಭರ್ತಿ ಮಾಡಿದ ವ್ಯಕ್ತಿಯು ಆತನು ಯಾವ ಸದಸ್ಯನ ಸ್ಥಾನದಲ್ಲಿ ಭರ್ತಿಯಾಗಿರುವನೋ ಆ ಸದಸ್ಯನು ಪ್ರಾಧಿಕಾರ ಅಥವಾ ಸಂಸ್ಥೆಯ ಸದಸ್ಯನಾಗಿ ಉಳಿಯುತ್ತಿದ್ದ ಬಾಕಿ ಅವಧಿಯವರೆಗೆ ಮಾತ್ರ ಸದಸ್ಯನಾಗಿರತಕ್ಕದ್ದು.

**44. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮ ಅಥವಾ ಶಾಸನಗಳು ಅಥವಾ ನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಯಾವುದೇ ಅಧಿಕಾರಿ ಅಥವಾ ಇತರ ನೌಕರರ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆ ನಡೆಸಲು ಅವಕಾಶ ಇರತಕ್ಕದ್ದಲ್ಲ.

**45. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮ ಮತ್ತು ಶಾಸನಗಳ ಯಾವುದೇ ಇತರ ಉಪಬಂಧಗಳಲ್ಲಿ ಏನೇ ಇದ್ದರೂ,–

(i) ಮೊದಲ ಕುಲಪತಿಯವರನ್ನು ಮತ್ತು ಸಹಕುಲಪತಿಗಳು ಯಾರಾದರು ಇದ್ದರೆ ಅವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು;

(ii) ಮೊದಲ ಕುಲಸಚಿವರನ್ನು ಮತ್ತು ಮೊದಲ ಹಣಕಾಸು ಅಧಿಕಾರಿಯವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು; ಮತ್ತು

(iii) ಮೊದಲ ಆಡಳಿತ ಮಂಡಳಿ, ಮೊದಲ ಹಣಕಾಸು ಸಮಿತಿ, ಮೊದಲ ದೂರಶಿಕ್ಷಣ ಸಮಿತಿ, ಮೊದಲ ಸಂಶೋಧನಾ ಪರಿಷತ್ತು ಹಾಗೂ ಮೊದಲ ಪ್ರಶಿಕ್ಷಣ ಪರಿಷತ್ತನ್ನು ಕುಲಾಧಿಪತಿಯವರು ರಚಿಸತಕ್ಕದ್ದು.

**46. ಶಾಶ್ವತ ಶಾಸನಬದ್ಧ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಕನಿಷ್ಠ ಇಪ್ಪತ್ತೈದು ಕೋಟಿ ರೂಪಾಯಿಗಳನ್ನುಳ್ಳ ಒಂದು ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು ಮತ್ತು ಈ ನಿಧಿಯನ್ನು ಸ್ವಪ್ರೇರಣೆಯಿಂದ ಹೆಚ್ಚಿಸಬಹುದೇ ಹೊರತು ಅದಕ್ಕಿಂತ ಕಡಿಮೆ ಮಾಡತಕ್ಕದ್ದಲ್ಲ.

(2) ವಿಶ್ವವಿದ್ಯಾಲಯವು, ನಿಯಮಿಸಬಹುದಾದಂಥ ವಿಧಾನದಲ್ಲಿ ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಹಣವನ್ನು ಹೂಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯವು, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಗೆ ವರ್ಗಾವಣೆ ಮಾಡಬಹುದು. ವಿಶ್ವವಿದ್ಯಾಲಯವನ್ನು ಸಮಾಪಣೆಗೊಳಿಸುವ ಸಂದರ್ಭದಲ್ಲಿ ಹೊರತುಪಡಿಸಿ, ಇತರ ಯಾವ ಸಂದರ್ಭದಲ್ಲೂ ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಯಾವ ಮೊಬಲಗನ್ನೂ ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(4) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಬರುವ ಆದಾಯದ ಶೇಕಡಾ ಎಪ್ಪತ್ತೈದರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸಗಳ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತೈದರಷ್ಟನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಯಲ್ಲಿ ಪುನಃ ತೊಡಗಿಸತಕ್ಕದ್ದು.

**47. ವಿಶ್ವವಿದ್ಯಾಲಯದ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂಥ ನಿಧಿಗಳನ್ನು ಒಳಗೊಂಡ ವಿಶ್ವವಿದ್ಯಾಲಯದ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದರಲ್ಲಿ ಕಾಲಕಾಲಕ್ಕೆ ಸ್ವೀಕರಿಸಬಹುದಾದ ದೇಣಿಗೆಗಳು ಮತ್ತು ಇತರ ನಿಧಿಗಳೂ ಒಳಗೊಂಡಿರಬಹುದು.

(2) ವಿಶ್ವವಿದ್ಯಾಲಯವು, ಶಾಸನಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ವಿಧಾನದಲ್ಲಿ ವಿಶ್ವವಿದ್ಯಾಲಯದ ದತ್ತಿನಿಧಿಯನ್ನು ಹೂಡುವ ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯ ದತ್ತಿ ನಿಧಿಯು, ವಿಶ್ವವಿದ್ಯಾಲಯವು ತನ್ನ ಸಾಮಾಜಿಕ ಧ್ಯೇಯೋದ್ದೇಶಗಳನ್ನು ನೆರವೇರಿಸುವ ಸಂದರ್ಭದಲ್ಲಿ ಮತ್ತು/ಅಥವಾ ಮುಂಗಾಣದ ಸನ್ನಿವೇಶಗಳಲ್ಲಿ ಉದ್ಭವಿಸಬಹುದಾದ ಹಣಕಾಸು ಸವಾಲುಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಸ್ವಇಚ್ಛೆಯಿಂದ ನಿರ್ವಹಿಸಿಕೊಂಡು ಬರಲು ಮತ್ತು ಜವಾಬ್ದಾರಿಯಿಂದ ಹಣ ಹೂಡಿಕೆ ಮಾಡಲು ಇಚ್ಛೆಯುಳ್ಳವರಾಗಿ ಸ್ವಯಂ ವಿಧಿಸಿಕೊಂಡ ನಿಧಿಯಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವು, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಗೆ ವರ್ಗಾಯಿಸಬಹುದು. ವಿಶ್ವವಿದ್ಯಾಲಯದ ಸಮಾಪಣೆಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭದಲ್ಲೂ ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನು ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(5) ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಬರುವ ಆದಾಯದ ಶೇಕಡಾ ಎಂಭತ್ತರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸಗಳ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತರಷ್ಟನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಯಲ್ಲಿ ಪುನಃ ತೊಡಗಿಸತಕ್ಕದ್ದು.

**48. ಸಾಮಾನ್ಯ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಸಾಮಾನ್ಯ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯವು ವಿಧಿಸಬಹುದಾದ ಎಲ್ಲಾ ಶುಲ್ಕಗಳು;

(ii) ಯಾವುದೇ ಇತರ ಮೂಲಗಳಿಂದ ಸ್ವೀಕರಿಸಬಹುದಾದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯವು ಮಾಡುವ ಎಲ್ಲಾ ದೇಣಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು;

(2) ಸಾಮಾನ್ಯ ನಿಧಿಗೆ ಜಮಾ ಮಾಡುವ ನಿಧಿಗಳನ್ನು ವಿಶ್ವವಿದ್ಯಾಲಯದ ಎಲ್ಲಾ ಆವರ್ತಕ ವೆಚ್ಚಗಳನ್ನು ಭರಿಸಲು ಉಪಯೋಗಿಸಿಕೊಳ್ಳತಕ್ಕದ್ದು.

**49. ಅಭಿವೃದ್ಧಿ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಅಭಿವೃದ್ಧಿ ನಿಧಿಯನ್ನು ಸಹ ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ವಿದ್ಯಾರ್ಥಿಗಳಿಗೆ ವಿಧಿಸಬಹುದಾದ ಅಭಿವೃದ್ಧಿ ಶುಲ್ಕ;

(ii) ವಿಶ್ವವಿದ್ಯಾಲಯದ ಅಭಿವೃದ್ಧಿಯ ಉದ್ದೇಶಕ್ಕಾಗಿ ಯಾವುದೇ ಇತರ ಮೂಲಗಳಿಂದ ಸ್ವೀಕರಿಸಿದ ಎಲ್ಲಾ ಮೊತ್ತ;

(2) ಈ ಅಧಿನಿಯಮದ ಅಡಿಯಲ್ಲಿ ರದ್ದುಗೊಳಿಸಲಾಗಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಸಮಿತಿಯ ಒಬ್ಬ ಸದಸ್ಯನು, ರದ್ದುಗೊಳಿಸಿದ ದಿನಾಂಕದಿಂದ ನಾಲ್ಕು ನಿರಂತರ ವರ್ಷಗಳ ಅವಧಿಗೆ ಸಮಿತಿಯ ಸದಸ್ಯನಾಗಿ ಪುನ: ಚುನಾಯಿತನಾಗಲು, ಪುನರ್‌ನೇಮಕಗೊಳ್ಳಲು, ಪುನರ್ ನಾಮನಿರ್ದೇಶಿತನಾಗಲು ಅಥವಾ ಪುನ: ಸಹ–ಸದಸ್ಯನಾಗಲು ಅರ್ಹನಾಗಿರತಕ್ಕದ್ದಲ್ಲ.

**98ಆರ್. ವಿವೇಚನಾಯುಕ್ತ (ಪ್ರುಡೆನ್ಸಿಯಲ್) ಮಾನದಂಡಗಳು.–** ಬಂಡವಾಳ ಹಾಗೂ ನಷ್ಟಸಂಭವವನ್ನು ಸರಿದೂಗಿಸುವ ಆಸ್ತಿಗಳು (ರಿಸ್ಕ್‌ವೇಟೆಡ್ ಅಸೆಟ್ಸ್) ಒಳಗೊಂಡಂತೆ, ವಿವೇಚನಾಯುಕ್ತ ಮಾನದಂಡಗಳನ್ನು, ರಿಜಿಸ್ಟ್ರಾರನು, ರಾಷ್ಟ್ರೀಯ ಬ್ಯಾಂಕಿನೊಂದಿಗೆ ಸಮಾಲೋಚಿಸಿ ಎಲ್ಲ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಸಲುವಾಗಿ ನಿಯಮಿಸತಕ್ಕದ್ದು.

**98ಎಸ್. ನಿರ್ದೇಶಕರು ಮತ್ತು ಕಾರ್ಯನಿರ್ವಹಣಾಧಿಕಾರಿಗಳನ್ನು ತೆಗೆದುಹಾಕುವುದು.– (1)** ರಾಜ್ಯ ಸಹಕಾರ ಬ್ಯಾಂಕಿನ ಅಥವಾ ಕೇಂದ್ರ ಸಹಕಾರ ಬ್ಯಾಂಕುಗಳ ಸಮಿತಿಯ ಸದಸ್ಯರು ಅಥವಾ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ತತ್ಕಾಲದಲ್ಲಿ ಜಾರಿಯಲ್ಲಿರುವ, ರಿಸರ್ವ್ ಬ್ಯಾಂಕು ನಿಯಮಿಸಿದ ಮಾನದಂಡಗಳನ್ನು ಈಡೇರಿಸತಕ್ಕದ್ದು.

(2) ರಿಸರ್ವ್‌ಬ್ಯಾಂಕ್ ಗೊತ್ತುಪಡಿಸಿದ ಮಾನದಂಡಗಳನ್ನು ಈಡೇರಿಸದ, ರಾಜ್ಯ ಸಹಕಾರ ಬ್ಯಾಂಕು ಅಥವಾ ಕೇಂದ್ರ ಸಹಕಾರ ಬ್ಯಾಂಕಿನ ಸದಸ್ಯನು ಅಥವಾ ಮುಖ್ಯ ಕಾರ್ಯನಿರ್ವಹಣಾಧಿಕಾರಿಯ ಹುದ್ದೆಯನ್ನು ಹೊಂದಿರುವ ಒಬ್ಬ ವ್ಯಕ್ತಿಯು, ಅಂಥ ಹುದ್ದೆಗೆ ಅನರ್ಹನೆಂದು ಪರಿಗಣಿಸತಕ್ಕದ್ದು ಮತ್ತು ಅಂಥ ವ್ಯಕ್ತಿಯು ಹುದ್ದೆ ಧಾರಣ ಮಾಡಿದ್ದರೆ, ರಿಸರ್ವ್ ಬ್ಯಾಂಕು ಅಥವಾ ರಾಷ್ಟ್ರೀಯ ಬ್ಯಾಂಕು ಹಾಗೆ ಸಲಹೆ ನೀಡಿದ ಎರಡು ತಿಂಗಳೊಳಗೆ, ರಿಜಿಸ್ಟ್ರಾರನು ಅಥವಾ ಸಂದರ್ಭಾನುಸಾರ ನೇಮಕಾತಿ ಪ್ರಾಧಿಕಾರವು, ಆತನನ್ನು ತೆಗೆದುಹಾಕತಕ್ಕದ್ದು. ಆದಾಗ್ಯೂ, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕದಂದು ಅಂಥ ಸದಸ್ಯರಾಗಿ ತಮ್ಮ ಹುದ್ದೆಯನ್ನು ಧಾರಣ ಮಾಡಿರುವ ಸಮಿತಿಯ ಹಾಲಿ ಚುನಾಯಿತ ಸದಸ್ಯರು, ತಮ್ಮ ಉಳಿದ ಅವಧಿಯು ಮುಕ್ತಾಯವಾಗುವವರೆಗೂ ತಮ್ಮ ಪದಗಳನ್ನು ಧಾರಣಮಾಡಿರುವುದು ಮುಂದುವರೆಸತಕ್ಕದ್ದು.

**98ಟಿ. ಸಮಿತಿಯಲ್ಲಿ ವೃತ್ತಿದಾರರ ಸಹ ಸದಸ್ಯತ್ವ.–** (1) ರಾಜ್ಯ ಸಹಕಾರ ಬ್ಯಾಂಕು ಅಥವಾ ಕೇಂದ್ರ ಸಹಕಾರ ಬ್ಯಾಂಕುಗಳ ಬ್ಯಾಂಕುಗಳ ವ್ಯವಸ್ಥಾಪನ ಸಮಿತಿಯು, ರಿಸರ್ವ್ ಬ್ಯಾಂಕು ಕಾಲಕಾಲಕ್ಕೆ ಗೊತ್ತುಪಡಿಸಬಹುದಾದಂತೆ ಅಂಥ ಕ್ಷೇತ್ರಗಳಲ್ಲಿ ವಿಶೇಷ ಜ್ಞಾನ ಅಥವಾ ಅನುಭವವುಳ್ಳ ಕನಿಷ್ಟ ಅಂಥ ಸಂಖ್ಯೆಯ ವೃತ್ತಿದಾರರನ್ನು ಹೊಂದಿರತಕ್ಕದ್ದು ಮತ್ತು ಅಂಥ ಸಂಖ್ಯೆಯ ವೃತ್ತಿದಾರರು ಚುನಾಯಿತರಾಗದಿದ್ದಲ್ಲಿ, ಆ ಸಹಕಾರ ಸಂಘದ ಸಮಿತಿಯು, ಕೊರತೆಯಷ್ಟರ ಮಟ್ಟಿಗೆ, ರಿಸರ್ವ್ ಬ್ಯಾಂಕು ಗೊತ್ತುಪಡಿಸಬಹುದಾದಂತೆ ಅಂಥ ಕ್ಷೇತ್ರಗಳಲ್ಲಿ ಜ್ಞಾನ ಅಥವಾ ಅನುಭವವುಳ್ಳ ವೃತ್ತಿದಾರರನ್ನು ಸಹಸದಸ್ಯರನ್ನಾಗಿ ಸೇರಿಸಿಕೊಳ್ಳತಕ್ಕದ್ದು. ಆ ಸಹಸದಸ್ಯರು, ಮತದಾನದ ಹಕ್ಕು ಒಳಗೊಂಡಂತೆ, ಎಲ್ಲಾ ಹಕ್ಕುಗಳನ್ನೂ ಹೊಂದಿರತಕ್ಕದ್ದು ಮತ್ತು ಅಂಥ ಸದಸ್ಯರ ಅವಧಿಯು, ಇತರ ಚುನಾಯಿತ ಸದಸ್ಯರ ಅವಧಿಯೊಂದಿಗೆ ಸಹವ್ಯಾಪಕವಾಗತಕ್ಕದ್ದು.

(2) ರಿಸರ್ವ್ ಬ್ಯಾಂಕು ನಿಗದಿಪಡಿಸಬಹುದಾದಂತೆ ಅಂಥ ಕ್ಷೇತ್ರದಲ್ಲಿ ಅಗತ್ಯವಾದ ವಿಶೇಷ ಜ್ಞಾನ ಅಥವಾ ಅನುಭವವನ್ನು ಹೊಂದಿಲ್ಲದವರು, ಸಮಿತಿಯ ಸದಸ್ಯರಾಗಿ ಸಹಸದಸ್ಯತ್ವ ಹೊಂದಿದ್ದಾರೆಂದು ರಿಸರ್ವ್ ಬ್ಯಾಂಕು ಅಥವಾ ರಾಷ್ಟ್ರೀಯ ಬ್ಯಾಂಕು ಅಭಿಪ್ರಾಯಪಟ್ಟರೆ, ಅಂಥ ಸಂಘದ ಸಮಿತಿಯು, ರಿಸರ್ವ್ ಬ್ಯಾಂಕು ಅಥವಾ ರಾಷ್ಟ್ರೀಯ ಬ್ಯಾಂಕಿನಿಂದ ಹಾಗೆ ಸಲಹೆ ಪಡೆದ ಎರಡು ತಿಂಗಳೊಳಗೆ, ಆತನಿಗೆ ಅಹವಾಲನ್ನು ಹೇಳಿಕೊಳ್ಳುವುದಕ್ಕೆ ಅವಕಾಶವನ್ನು ನೀಡಿದ ತರುವಾಯ, ಆ ವ್ಯಕ್ತಿಯನ್ನು ತೆಗೆದುಹಾಕಿರುವುದನ್ನು ಖಚಿತಪಡಿಸತಕ್ಕದ್ದು.

**98ಯು. ಲೆಕ್ಕಗಳ ಲೆಕ್ಕ ಪರಿಶೋಧನೆ.–** ರಾಜ್ಯ ಸಹಕಾರಿ ಬ್ಯಾಂಕು ಮತ್ತು ಕೇಂದ್ರ ಸಹಕಾರಿ ಬ್ಯಾಂಕು, ಲೆಕ್ಕ ಪರಿಶೋಧನೆ ಮಾಡಿಸುವಂತೆ ಮಾಡತಕ್ಕದ್ದು ಮತ್ತು ರಾಷ್ಟ್ರೀಯ ಬ್ಯಾಂಕಿನಿಂದ ಅನುಮೋದಿತವಾದ ಪಟ್ಟಿಯಿಂದ ಅದು ಆಯ್ಕೆ ಮಾಡಿದ ಚಾರ್ಟರ್ಡ್ ಅಕೌಂಟೆಂಟ್‌ರಿಂದ ತನ್ನ ಲೆಕ್ಕಗಳನ್ನು ಪ್ರಮಾಣೀಕರಿಸಿಕೊಳ್ಳತಕ್ಕದ್ದು.

**98ವಿ. ಸಹಕಾರಿ ಪತ್ತಿನ ರಚನೆಯ ವಿಶೇಷ ಲೆಕ್ಕ ಪರಿಶೋಧನೆ.–** ಸಹಕಾರಿ ಲೆಕ್ಕ ಪರಿಶೋಧನೆಯ ನಿರ್ದೇಶಕರು, ರಿಸರ್ವ್ ಬ್ಯಾಂಕು ಗೊತ್ತುಪಡಿಸಿದ ರೀತಿಯಲ್ಲಿ ಮತ್ತು ನಮೂನೆಯಲ್ಲಿ, ರಿಸರ್ವ್ ಬ್ಯಾಂಕಿನ ಕೋರಿಕೆಯ ಮೇರೆಗೆ, ರಾಜ್ಯ ಸಹಕಾರಿ ಬ್ಯಾಂಕು ಅಥವಾ ಕೇಂದ್ರ ಸಹಕಾರಿ ಬ್ಯಾಂಕುಗಳ ವಿಶೇಷ ಲೆಕ್ಕ ಪರಿಶೋಧನೆಯನ್ನು ಮಾಡಿಸುವ ವ್ಯವಸ್ಥೆ ಮಾಡತಕ್ಕದ್ದು ಮತ್ತು ವಿಶೇಷ ಲೆಕ್ಕ ಪರಿಶೋಧನೆಯ ವರದಿಯ ಪ್ರತಿಯನ್ನು ರಿಸರ್ವ್ ಬ್ಯಾಂಕಿಗೆ ಮತ್ತು ರಾಷ್ಟ್ರೀಯ ಬ್ಯಾಂಕಿಗೆ, ನಿಗದಿಪಡಿಸಲಾದ ಅವಧಿಯೊಳಗೆ ಒದಗಿಸುವುದಕ್ಕೆ ವ್ಯವಸ್ಥೆ ಮಾಡತಕ್ಕದ್ದು. ಈ ಅಧಿನಿಯಮದ ಅಡಿಯಲ್ಲಿ ಮಾಡಲಾದ ಲೆಕ್ಕ ಪರಿಶೋಧನೆಗೆ ಸಂಬಂಧಿಸಿದ ಉಪಬಂಧಗಳು, ಅಂಥ ವಿಶೇಷ ಲೆಕ್ಕಪರಿಶೋಧನೆಗೂ ಸಹಾ ಅನ್ವಯವಾಗತಕ್ಕದ್ದು.

**98ಡಬ್ಲ್ಯೂ. 'ಬ್ಯಾಂಕು' ಪದದ ಬಳಕೆಯ ನಿರ್ಬಂಧ.–** ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ, 1949ರ (1949ರ ಕೇಂದ್ರ ಅಧಿನಿಯಮ 10) ಅಡಿಯಲ್ಲಿ ಬ್ಯಾಂಕು ಎಂದು ಕಾರ್ಯನಿರ್ವಹಿಸಲು ಅನುಮತಿ ಪಡೆದವುಗಳನ್ನು ಹೊರತುಪಡಿಸಿ, ಯಾವುದೇ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ಅಥವಾ ಅದರ ಒಕ್ಕೂಟ ಅಥವಾ ಸಂಘವು, ತನ್ನ ನೋಂದಾಯಿತ ಹೆಸರಿನಲ್ಲಿ 'ಬ್ಯಾಂಕು', 'ಬ್ಯಾಂಕರು' , 'ಬ್ಯಾಂಕಿಂಗ್' ಅಥವಾ 'ಬ್ಯಾಂಕು' ಎಂಬ ಪದದ ಯಾವುದೇ ಇತರ ವ್ಯುತ್ಪನ್ನ ಪದದೊಡನೆ ನೋಂದಾಯಿತಗೊಳ್ಳತಕ್ಕದ್ದಲ್ಲ ಅಥವಾ ಅದನ್ನೇ ತನ್ನ ಹೆಸರಿನ ಭಾಗವಾಗಿ ಬಳಸತಕ್ಕದ್ದಲ್ಲ:

ಪರಂತು, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭಕ್ಕೆ ಮೊದಲು ಬ್ಯಾಂಕಿಂಗ್ ನಿಯಂತ್ರನ ಅಧಿನಿಯಮ, 1949ರ (1949ರ ಕೇಂದ್ರ ಅಧಿನಿಯಮ 10) ಅಡಿಯಲ್ಲಿ ಬ್ಯಾಂಕು ಎಂಬುದಾಗಿ ಕಾರ್ಯ ನಿರ್ವಹಿಸಲು ಅನುಮತಿ ಪಡೆದವುಗಳನ್ನು ಹೊರತುಪಡಿಸಿ, ಯಾವುದೇ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ಅಥವಾ ಅದರ ಒಕ್ಕೂಟ ಅಥವಾ ಸಂಘವು, 'ಬ್ಯಾಂಕು' ಎಂಬ ಪದದೊಂದಿಗೆ ನೋಂದಾಯಿತವಾಗಿದ್ದಲ್ಲಿ ಅಥವಾ ತನ್ನ ಹೆಸರಿನ ಭಾಗವಾಗಿ ಯಾವುದೇ ಅದರ ವ್ಯುತ್ಪನ್ನ ಪದದೊಡನೆ ತನ್ನ ಹೆಸರಿನ ಭಾಗವಾಗಿ ಅದನ್ನೇ ಬಳಸುತ್ತಿದ್ದಲ್ಲಿ, ಅಂಥ ಪ್ರಾರಂಭದ ದಿನಾಂಕದಿಂದ ಮೂರು ತಿಂಗಳುಗಳೊಳಗೆ, ಅದರ ಹೆಸರಿನೊಂದಿಗೆ 'ಬ್ಯಾಂಕು' ಪದವನ್ನು ಅಥವಾ ಅದರ ವ್ಯುತ್ಪನ್ನ ಪದವು ಯಾವುದಾದರೂ ಇದ್ದಲ್ಲಿ, ಅದನ್ನು ತೆಗೆದುಹಾಕಿ ಅದರ ಹೆಸರನ್ನು ಬದಲಾಯಿಸತಕ್ಕದ್ದು:

ಮತ್ತೂ ಪರಂತು, ಅದರಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಮೇಲಿನ ಉಪಬಂಧಗಳನ್ನು ಪಾಲಿಸಲು ಯಾವುದೇ ಸಹಕಾರ ಸಂಘವು ತಪ್ಪಿದಲ್ಲಿ, ರಿಜಿಸ್ಟ್ರಾರನು, ಅಂಥ ಸಂಘವನ್ನು ಕೂಡಲೇ ಸಮಾಪನಗೊಳಿಸಲು ಆದೇಶಿಸತಕ್ಕದ್ದು.

**98ಎಕ್ಸ್. ರಿಸರ್ವ್ ಬ್ಯಾಂಕಿನ ನಿಯಂತ್ರಕ ನಿಯಮನಗಳ ಅನುಷ್ಠಾನ.–** (1) ರಿಜಿಸ್ಟ್ರಾರನು, ರಿಸರ್ವ್ ಬ್ಯಾಂಕಿನಿಂದ ಸಲಹೆಯನ್ನು ಸ್ವೀಕರಿಸಿದ ದಿನಾಂಕದಿಂದ ಒಂದು ತಿಂಗಳೊಳಗಾಗಿ ಅಥವಾ ರಿಸರ್ವ್ ಬ್ಯಾಂಕ್ ಅನುಮತಿಸಬಹುದಾದ ಅಂಥ ಸಮಯದೊಳಗಾಗಿ, ರಾಜ್ಯ ಸಹಕಾರ ಬ್ಯಾಂಕು ಮತ್ತು ಕೇಂದ್ರ ಸಹಕಾರ ಬ್ಯಾಂಕುಗಳ ಸಮಿತಿಯ ರದ್ದತಿ ಮತ್ತು ಸಮಾಪನದ ಶಿಫಾರಸು ಒಳಗೊಂಡಂತೆ ರಿಸರ್ವ್ ಬ್ಯಾಂಕು ನೀಡಿದ ನಿಯಂತ್ರಕ ನಿಯಮನಗಳ ಅನುಷ್ಠಾನವನ್ನು ಖಚಿತಪಡಿಸತಕ್ಕದ್ದು.

(2) ರದ್ದುಗೊಳಿಸುವಂತೆ ಅಥವಾ ಸಮಾಪನಗೊಳಿಸಲು ರಿಸರ್ವ್ ಬ್ಯಾಂಕು ಸಲಹೆ ಮಾಡಿದ ಮೇಲೆ, ರಿಜಿಸ್ಟ್ರಾರನು, ರಿಸರ್ವ್ ಬ್ಯಾಂಕಿನಿಂದ ಸಲಹೆಯನ್ನು ಸ್ವೀಕರಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ ಅಥವಾ ರಿಸರ್ವ್ ಬ್ಯಾಂಕು ಅನುಮತಿಸಬಹುದಾದ ಅಂಥ ಸಮಯದೊಳಗೆ ಆಡಳಿತಗಾರ ಅಥವಾ ಸಂದರ್ಭಾನುಸಾರ ಸಮಾಪಕನನ್ನು ನೇಮಕ ಮಾಡಿರುವುದರರ ಬಗ್ಗೆ ಖಚಿತಪಡಿಸತಕ್ಕದ್ದು.

(3) ರಾಜ್ಯ ಸಹಕಾರ ಬ್ಯಾಂಕು ಅಥವಾ ಕೇಂದ್ರ ಸಹಕಾರ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು, ರಿಸರ್ವ್ ಬ್ಯಾಂಕು ನಿರ್ದಿಷ್ಟಪಡಿಸಿದ ಅರ್ಹತಾ ಮಾನದಂಡಗಳನ್ನು ನೆರವೇರಿಸಿರುವುದಿಲ್ಲವೆಂದು, ರಿಸರ್ವ್ ಬ್ಯಾಂಕು ಅಥವಾ ರಾಷ್ಟ್ರೀಯ ಬ್ಯಾಂಕು ಅಭಿಪ್ರಾಯಪಟ್ಟಲ್ಲಿ, ರಿಜಿಸ್ಟ್ರಾರನು, ರಿಸರ್ವ್ ಬ್ಯಾಂಕಿನ ಅಥವಾ ಸಂದರ್ಭಾನುಸಾರ ರಾಷ್ಟ್ರೀಯ ಬ್ಯಾಂಕಿನ ಆದೇಶಗಳನ್ನು, ರಿಸರ್ವ್ ಬ್ಯಾಂಕು ಅಥವಾ ರಾಷ್ಟ್ರೀಯ ಬ್ಯಾಂಕು ಹಾಗೆ ಸಲಹೆ ಮಾಡಿದ ದಿನಾಂಕದಿಂದ ಎರಡು ತಿಂಗಳೊಳಗೆ ಪಾಲಿಸುವಂತೆ ನಿರ್ದೇಶನಗಳನ್ನು ನೀಡತಕ್ಕದ್ದು.

(4) ರಿಸರ್ವ್ ಬ್ಯಾಂಕು, ಗೊತ್ತುಪಡಿಸಿದಂತೆ ಅಂಥ ಕ್ಷೇತ್ರಗಳಲ್ಲಿ ವಿಶೇಷ ಜ್ಞಾನ ಅಥವಾ ಅನುಭವವನ್ನು ಹೊಂದಿಲ್ಲದ ಒಬ್ಬ ವ್ಯಕ್ತಿಯನ್ನು ರಾಜ್ಯ ಸಹಕಾರ ಬ್ಯಾಂಕು ಅಥವಾ ಕೇಂದ್ರ ಸಹಕಾರ ಬ್ಯಾಂಕಿನ ಸಮಿತಿಯ ಸಹ–ಸದಸ್ಯನನ್ನಾಗಿ ಆಯ್ಕೆ ಮಾಡಲಾಗಿದೆಯೆಂದು ರಿಸರ್ವ್ ಬ್ಯಾಂಕು ಅಥವಾ ರಾಷ್ಟ್ರೀಯ ಬ್ಯಾಂಕು ಅಭಿಪ್ರಾಯಪಟ್ಟಲ್ಲಿ, ರಿಜಿಸ್ಟ್ರಾರನು, ರಿಸರ್ವ್ ಬ್ಯಾಂಕು ಅಥವಾ ರಾಷ್ಟ್ರೀಯ ಬ್ಯಾಂಕಿನಿಂದ ಸಲಹೆಯನ್ನು ಪಡೆದ ಮೇಲೆ, ರಿಸರ್ವ್ ಬ್ಯಾಂಕು ಅಥವಾ ಸಂದರ್ಭಾನುಸಾರ ರಾಷ್ಟ್ರೀಯ ಬ್ಯಾಂಕಿನ ಆದೇಶಗಳನ್ನು, ರಿಸರ್ವ್ ಬ್ಯಾಂಕು ಅಥವಾ ರಾಷ್ಟ್ರೀಯ ಬ್ಯಾಂಕಿನಿಂದ ಹಾಗೆ ಸಲಹೆ ಪಡೆದ ಎರಡು ತಿಂಗಳುಗಳೊಳಗೆ, ಪಾಲಿಸತಕ್ಕದ್ದೆಂದು ನಿರ್ದೇಶನಗಳನ್ನು ನೀಡತಕ್ಕದ್ದು.

**98ವೈ. ರಾಜ್ಯ ಸರ್ಕಾರದಿಂದ ವಿನಾಯತಿ.–** ರಿಸರ್ವ್ ಬ್ಯಾಂಕಿನೊಡನೆ ಅಥವಾ ರಾಷ್ಟ್ರೀಯ ಬ್ಯಾಂಕಿನೊಡನೆ ಪೂರ್ವ ಸಮಾಲೋಚನೆಯ ಹೊರತು, ಸಹಕಾರ ಪತ್ತಿನ ರಚನೆಯಲ್ಲಿಯ ಯಾವುದೇ ಸಂಘಕ್ಕೆ ಈ ಅಧಿನಿಯಮದ 121ನೇ ಪ್ರಕರಣದ ಅಡಿಯಲ್ಲಿ, ಈ ಅಧ್ಯಾಯದ ಉಪಬಂಧಗಳ ಅನ್ವಯಿಸುವಿಕೆಯಿಂದ ಯಾವುದೇ ರೀತಿ ವಿನಾಯತಿ ನೀಡತಕ್ಕದ್ದಲ್ಲ."

**31. 100ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 100ನೇ ಪ್ರಕರಣದ (3)ನೇ ಉಪಪ್ರಕರಣದ ವಿವರಣೆಯಲ್ಲಿ,–

(1) (ii) ನೇ ಬಾಬಿನಲ್ಲಿ "ರಿಜಿಸ್ಟ್ರಾರನು ನಿಯಮಿಸಬಹುದಾದಂತೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(2) (iii) ನೇ ಬಾಬಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(iii) "ಋತುಮಾನಕ್ಕನುಸಾರವಾಗಿ ಹಣ ಒದಗಿಸುವುದು" ಎಂದರೆ, ಮೇಲೆ (ii) ನೇ ಬಾಬಿನಲ್ಲಿ ಹೇಳಲಾದ ಉದ್ದೇಶಗಳಿಗಾಗಿ ಸಾಲಗಳನ್ನು ನೀಡುವುದು; ಅಂಥ ಸಾಲಗಳು, ಮುಂಬರುವ ಮಾರ್ಚ್ 31ರಂದು ಅಥವಾ ಅದಕ್ಕೆ ಮೊದಲು ಅಥವಾ ಹಣ ನೀಡುವ ಬ್ಯಾಂಕು ಅಥವಾ ಪತ್ತಿನ ಏಜನ್ಸಿಯು, ನಿರ್ದಿಷ್ಟಪಡಿಸಬಹುದಾದ ಅಂಥ ಇತರ ದಿನಾಂಕದಂದು ಅಥವಾ ಅದಕ್ಕೆ ಮೊದಲು, ಮರುಸಂದಾಯವಾಗಬೇಕಾದಂತಹವು ಗಳಾಗಿರತಕ್ಕದ್ದು."

**32. 105ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 105ನೇ ಪ್ರಕರಣಕ್ಕೆ ಅದರ (1)ನೇ ಉಪಪ್ರಕರಣವೆಂದು ಪುನರ್ ಸಂಖ್ಯೆ ನೀಡತಕ್ಕದ್ದು ಮತ್ತು ಹಾಗೆ ಪುನರ್ ಸಂಖ್ಯೆ ನೀಡಲಾದ (1)ನೇ ಉಪಪ್ರಕರಣದ ತರುವಾಯ, ಈ ಮುಂದಿನ ಉಪಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

"(2) ಹಣದ ಸಂದಾಯಕ್ಕಾಗಿನ ಯಾವುದೇ ಆದೇಶದ, ನಿರ್ಣಯದ ಅಥವಾ ಐತೀರ್ಪಿನ ವಿರುದ್ಧ ಸಲ್ಲಿಸುವ ಅಪೀಲಿನ ಜೊತೆಯಲ್ಲಿ, ಆ ಆದೇಶದ, ನಿರ್ಣಯದ ಅಥವಾ ಐತೀರ್ಪಿನ ಪ್ರಕಾರ ಬಾಕಿ ಇರುವ ಮೊಬಲಗಿನ ಶೇಕಡಾ

ಇಪ್ಪತ್ತೈದರಷ್ಟನ್ನು ಸಂಬಂಧಪಟ್ಟ ಸಂಘದಲ್ಲಿ ಠೇವಣಿ ಇಟ್ಟಿರುವ ಬಗ್ಗೆ ತೃಪ್ತಿಕರವಾದ ರುಜುವಾತನ್ನು ಸಲ್ಲಿಸಿದ್ದ ಹೊರತು, ಅಪೀಲು ಪ್ರಾಧಿಕಾರವು ಆ ಯಾವುದೇ ಅಪೀಲನ್ನು ಪರಿಗಣಿಸತಕ್ಕದ್ದಲ್ಲ. ಅಪೀಲನ್ನು ವಿಲೆ ಮಾಡಿದ ತರುವಾಯ, ಹಾಗೆ ಠೇವಣಿ ಇಟ್ಟಿರುವ ಮೊಬಲಗನ್ನು, ಅಪೀಲುದಾರನು ಸಂದಾಯ ಮಾಡಬೇಕಾದ ಮೊಬಲಗಿನ ಸಂಬಂಧದಲ್ಲಿ ಹೊಂದಾಣಿಕೆ ಮಾಡತಕ್ಕದ್ದು ಮತ್ತು ಅಪೀಲುದಾರನು ಯಾವುದೇ ಮೊಬಲಗನ್ನು ಸಂದಾಯ ಮಾಡಬೇಕಾಗಿಲ್ಲದ ಸಂದರ್ಭದಲ್ಲಿ, ಹಾಗೆ ಠೇವಣಿ ಇಟ್ಟಿರುವ ಮೊಬಲಗನ್ನು ಸಂಘವು ಅವನಿಗೆ ಮರುಪಾವತಿ ಮಾಡತಕ್ಕದ್ದು."

**33. 106ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 106ನೇ ಪ್ರಕರಣದಲ್ಲಿ,–

(ಎ) (1)ನೇ ಉಪಪ್ರಕರಣದಲ್ಲಿ,–

(i) (ಎ) ಮತ್ತು (ಬಿ) ಖಂಡಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ,–

"(ಎ) 7ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ

(ಬಿ) 12ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ"

(ii) ಈಗ ಇರುವ (ಡಿ–1) ಖಂಡಕ್ಕೆ (ಡಿ–2) ಖಂಡವೆಂದು ಪುನರ್ ಸಂಖ್ಯೆ ನೀಡತಕ್ಕದ್ದು ಮತ್ತು ಹಾಗೆ ಪುನರ್ ಸಂಖ್ಯೆ ನೀಡಲಾದಂಥ ಖಂಡಕ್ಕೆ ಮುಂಚೆ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ.–

"(ಡಿ–1) 28ಎ(5) ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ"

(iii) (ಇ) ಖಂಡದಲ್ಲಿ, "ಸಹಕಾರ ಸಂಘದ ಸಮಿತಿಯನ್ನು ತೆಗೆದುಹಾಕಲು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(iv) (ಇ–1) ಖಂಡದಲ್ಲಿ, "ವಿಶೇಷ ಅಧಿಕಾರಿಯನ್ನು ನೇಮಿಸುವ" ಎಂಬ ಪದಗಳನ್ನು ಬಿಟ್ಟು ಬಿಡತಕ್ಕದ್ದು.

(v) (ಜೆ) ಖಂಡದಲ್ಲಿ, "ಸಹಕಾರ ಸಂಘದ ಸಮಾಪನವನ್ನು ನಿರ್ದೇಶಿಸಿ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(vi) (ಕೆ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ,–

"(ಕೆ–1) 99ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ"

(vii) (ಎಂ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎನ್) 105ಎ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ

(ಒ) 111ನೇ ಪ್ರಕರಣದ ಮೇರೆಗೆ ಮಾಡಿದ ರಿಜಿಸ್ಟ್ರಾರನ ಆದೇಶ."

(ಬಿ) (2)ನೇ ಉಪಪ್ರಕರಣದಲ್ಲಿ, (ಎ) ಮತ್ತು (ಬಿ) ಖಂಡಗಳಿಗೆ ಮತ್ತು ಅದರ ಮೇರೆಗಿನ ಮೊದಲನೇ ಪರಂತುಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎ) ಒಂದು ಕಾರ್ಯ, ತೀರ್ಮಾನ ಅಥವಾ ಆದೇಶವನ್ನು ಸಹಾಯಕ ರಿಜಿಸ್ಟ್ರಾರನು ಮಾಡಿದ್ದರೆ, ಕ್ಷೇತ್ರಾಧಿಕಾರ ಹೊಂದಿರುವ ಉಪ ರಿಜಿಸ್ಟ್ರಾರನಿಗೆ;

(ಬಿ) ಒಂದು ಕಾರ್ಯ, ತೀರ್ಮಾನ ಅಥವಾ ಆದೇಶವನ್ನು ಉಪ ರಿಜಿಸ್ಟ್ರಾರನು ಮಾಡಿದ್ದರೆ, ಕ್ಷೇತ್ರಾಧಿಕಾರ ಹೊಂದಿರುವ ಜಂಟಿ ರಿಜಿಸ್ಟ್ರಾರನಿಗೆ;

(ಸಿ) ಒಂದು ಕಾರ್ಯ, ತೀರ್ಮಾನ ಅಥವಾ ಆದೇಶವನ್ನು ಜಂಟಿ ರಿಜಿಸ್ಟ್ರಾರನು ಮಾಡಿದ್ದರೆ, ಕ್ಷೇತ್ರಾಧಿಕಾರ ಹೊಂದಿರುವ ಹೆಚ್ಚುವರಿ ರಿಜಿಸ್ಟ್ರಾರನಿಗೆ ಅಥವಾ ಸಂದರ್ಭಾನುಸಾರ ರಿಜಿಸ್ಟ್ರಾರನಿಗೆ ;

(ಡಿ) ಒಂದು ಕಾರ್ಯ, ತೀರ್ಮಾನ ಅಥವಾ ಆದೇಶವನ್ನು ಹೆಚ್ಚುವರಿ ರಿಜಿಸ್ಟ್ರಾರನು ಮಾಡಿದ್ದರೆ, ರಿಜಿಸ್ಟ್ರಾರನಿಗೆ ;

(ಇ) ಒಂದು ಕಾರ್ಯ, ತೀರ್ಮಾನ ಅಥವಾ ಆದೇಶವನ್ನು ರಿಜಿಸ್ಟ್ರಾರನು ಮಾಡಿದ್ದರೆ, ರಾಜ್ಯ ಸರ್ಕಾರಕ್ಕೆ;"

(ಸಿ) (4)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(5) ಅಪೀಲನ್ನು, ನ್ಯಾಯಾಲಯವು ತಡೆಯಾಜ್ಞೆಯನ್ನೇನಾದರು ನೀಡಿದ್ದರೆ, ಆ ಅವಧಿಯನ್ನು ಹೊರತುಪಡಿಸಿ, ಹನ್ನೆರಡು ತಿಂಗಳ ಅವಧಿಯೊಳಗಾಗಿ ತೀರ್ಮಾನಿಸತಕ್ಕದ್ದು. ಆದಾಗ್ಯೂ, ರಿಜಿಸ್ಟ್ರಾರನು ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಿ ಆ ಅವಧಿಯನ್ನು ಹದಿನೆಂಟು ತಿಂಗಳ ಅವಧಿಯವರೆಗೆ ವಿಸ್ತರಿಸಬಹುದು.

(6) ಹಣದ ಸಂದಾಯಕ್ಕಾಗಿನ ಯಾವುದೇ ಆದೇಶದ ನಿರ್ಣಯ ಅಥವಾ ಐತೀರ್ಪಿನ ವಿರುದ್ಧ ಸಲ್ಲಿಸುವ ಅಪೀಲಿನ ಜೊತೆಯಲ್ಲಿ, ಆ ಆದೇಶದ, ನಿರ್ಣಯದ ಅಥವಾ ಐತೀರ್ಪಿನ ಪ್ರಕಾರ ಬಾಕಿ ಇರುವ ಮೊಬಲಗಿನ ಶೇಕಡಾ ಇಪ್ಪತ್ತೈದರಷ್ಟನ್ನು ಸಂಬಂಧಪಟ್ಟ ಸಂಘದಲ್ಲಿ ಠೇವಣಿ ಇಟ್ಟಿರುವ ಬಗ್ಗೆ ತೃಪ್ತಿಕರವಾದ ರುಜುವಾತನ್ನು ಸಲ್ಲಿಸಿದ್ದ ಹೊರತು, ಅಪೀಲು ಪ್ರಾಧಿಕಾರವು ಆ ಯಾವುದೇ ಅಪೀಲನ್ನು ಪರಿಗಣಿಸತಕ್ಕದ್ದಲ್ಲ. ಅಪೀಲನ್ನು ವಿಲೆ ಮಾಡಿದ ತರುವಾಯ, ಹಾಗೆ ಠೇವಣಿ ಇಟ್ಟಿರುವ ಮೊಬಲಗನ್ನು, ಅಪೀಲುದಾರನು ಸಂದಾಯ ಮಾಡಬೇಕಾದ ಮೊಬಲಗಿನ ಸಂಬಂಧದಲ್ಲಿ ಹೊಂದಾಣಿಕೆ ಮಾಡತಕ್ಕದ್ದು ಮತ್ತು ಅಪೀಲುದಾರನು ಯಾವುದೇ ಮೊಬಲಗನ್ನು ಸಂದಾಯ ಮಾಡಬೇಕಾಗಿಲ್ಲದ ಸಂದರ್ಭದಲ್ಲಿ, ಹಾಗೆ ಠೇವಣಿ ಇಟ್ಟಿರುವ ಮೊಬಲಗನ್ನು ಸಂಘವು ಅವನಿಗೆ ಮರುಪಾವತಿ ಮಾಡತಕ್ಕದ್ದು."

**34. 111ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 111ನೇ ಪ್ರಕರಣದ (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) (ಎ) ಸಹಕಾರ ಪತ್ತಿನ ರಚನೆಯಲ್ಲಿಯ ಸಂಘಕ್ಕೆ ಸಂಬಂಧಿಸಿದ ವಿಷಯಗಳನ್ನು ಹೊರತುಪಡಿಸಿ, ಲೆಕ್ಕ ಪರಿಶೋಧನೆಯ ಕಾರಣದಿಂದ ಉದ್ಭವಿಸುವ ವಿಷಯಗಳಲ್ಲಿ, ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕನ;

(ಬಿ) ಸಹಕಾರ ಪತ್ತಿನ ರಚನೆಯಲ್ಲಿಯ ಸಂಘಕ್ಕೆ ಸಂಬಂಧಪಟ್ಟಂತೆ ಲೆಕ್ಕ ಪರಿಶೋಧನೆಗೆ ಸಂಬಂಧಿಸಿದ ವಿಷಯಗಳು ಒಳಗೊಂಡಂತೆ ಎಲ್ಲ ಇತರ ವಿಷಯಗಳ ಸಂಬಂಧದಲ್ಲಿ ರಿಜಿಸ್ಟ್ರಾರನ,

–ಪೂರ್ವ ಮಂಜೂರಾತಿಯಿಲ್ಲದೆ ಈ ಅಧಿನಿಯಮದ ಅಡಿಯಲ್ಲಿ ಯಾವ ಅಭಿಯೋಜನೆಗಳನ್ನು ಹೂಡತಕ್ಕದ್ದಲ್ಲ:

ಪರಂತು, ಸಹಕಾರ ಸಂಘದ ಲೆಕ್ಕ ಪರಿಶೋಧನೆ, ವಿಚಾರಣೆ ಅಥವಾ ತಪಾಸಣೆಯ ಅವಧಿಯಲ್ಲಿ ಅಥವಾ ಸಹಕಾರ ಸಂಘದ ಸಾಮಾನ್ಯ ವ್ಯವಹಾರ ನಡೆಯುತ್ತಿರುವಾಗ, ಪತ್ತೆಯಾದ, ಸಹಕಾರ ಸಂಘದ ನಿಧಿಗಳ ದುರುಪಯೋಗ ಅಥವಾ ದುರ್ವಿನಿಯೋಗಕ್ಕಾಗಿ ಆರೋಪಿಸಲಾದ ತಪ್ಪಿತಸ್ಥರ ವಿರುದ್ಧದ ಕ್ರಿಮಿನಲ್ ದೂರುಗಳನ್ನು ದಾಖಲು ಮಾಡುವುದಕ್ಕಾಗಿ ರಿಜಿಸ್ಟ್ರಾರನ ಅಥವಾ ಸಹಕಾರಿ ಲೆಕ್ಕ ಪರಿಶೋಧಕರ ಮಂಜೂರಾತಿ ಪಡೆಯುವ ಅಗತ್ಯವಿರತಕ್ಕದ್ದಲ್ಲ.

**35. 128ಎ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 128ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು ಮತ್ತು 2010ರ ಜುಲೈ ಒಂದನೇ ದಿನಾಂಕದಿಂದ ಜಾರಿಗೆ ಬರುವಂತೆ ಬಿಟ್ಟುಬಿಡತಕ್ಕದ್ದು, ಎಂದರೆ:–

**"128ಎ. ಸಾಮಾನ್ಯ ಕೇಡರಿನ ರಚನೆ.–** (1) ಈ ಅಧಿನಿಯಮದಲ್ಲಿ, ನಿಯಮಗಳಲ್ಲಿ ಅಥವಾ ಉಪವಿಧಿಗಳಲ್ಲಿ ಏನೇ ಅಡಕವಾಗಿದ್ದರೂ, ರಿಜಿಸ್ಟ್ರಾರನು ಸಹಕಾರ ಚಳುವಳಿಯ ಹಿತಾಸಕ್ತಿಯಲ್ಲಿ, ಯಾವುದೇ ವರ್ಗದ ಸಹಕಾರ ಸಂಘಕ್ಕಾಗಿ ನೌಕರರ ಕೇಡರನ್ನು ರಚಿಸುವುದು ಅವಶ್ಯವೆಂದು ಪರಿಗಣಿಸಿದರೆ, ಆ ಸಹಕಾರ ಸಂಘಗಳ ವರ್ಗವು ಸಂಯೋಜಿತವಾಗಿರುವ ಒಂದು ಅಥವಾ ಹೆಚ್ಚು ಒಕ್ಕೂಟ ಸಂಘಗಳಿಗೆ, ತಾನು ನಿರ್ದಿಷ್ಟಪಡಿಸಬಹುದಾದಂಥ ಸಹಕಾರ ಸಂಘಗಳ ವರ್ಗದ ಅಂಥ ನೌಕರರ ಪ್ರವರ್ಗಗಳ ಸಂಬಂಧದಲ್ಲಿ ನೇಮಕಾತಿ, ವರ್ಗಾವಣೆ ಮತ್ತು ಶಿಸ್ತು ಕ್ರಮಗಳನ್ನು ಕುರಿತ ಅಧಿಕಾರವನ್ನು ಚಲಾಯಿಸಲು ಅಧಿಕಾರ ನೀಡತಕ್ಕುದು ಮತ್ತು ಸದರಿ ಉದ್ದೇಶವನ್ನು ಜಾರಿಗೆ ತರಲು ಅವಶ್ಯವಾಗಬಹುದಾದಂಥ ವಿನಿಯಮಗಳನ್ನು ರಚಿಸತಕ್ಕುದು. ಅಂಥ ಒಕ್ಕೂಟದ ಸಂಘಗಳಿಗೆ ರಿಜಿಸ್ಟ್ರಾರನು ಹಾಗೆ ಅಧಿಕಾರ ನೀಡಿರುವಲ್ಲಿ, ಸಂಯೋಜಿತ ಸಹಕಾರ ಸಂಘಗಳು, ವಿನಿಯಮಗಳು ಅವಕಾಶ ನೀಡುವಷ್ಟರಮಟ್ಟಿಗೆ ಹೊರತು ಅಂಥ ನೌಕರರ ಪ್ರವರ್ಗಗಳನ್ನು ಕುರಿತು ವ್ಯವಹರಿಸಲು ಅಧಿಕಾರ ಹೊಂದಿರತಕ್ಕುದಲ್ಲ.

(2) ರಿಜಿಸ್ಟ್ರಾರನು, ಈ ಉದ್ದೇಶಕ್ಕಾಗಿ ಒಕ್ಕೂಟ ಸಂಘವು ವಹಿಸಬಹುದಾದ ಅಥವಾ ವಹಿಸಿರುವ ವೆಚ್ಚ ಭರಿಸಲು ಅಂಥ ಮೊಬಲಗನ್ನು ಪ್ರತಿ ವರ್ಷವೂ ವಂತಿಗೆ ನೀಡಲು ಸಂಯೋಜಿತ ಸಹಕಾರ ಸಂಘಗಳನ್ನು ಅಗತ್ಯಪಡಿಸುವ ಅಧಿಕಾರವನ್ನು ಹೊಂದಿರತಕ್ಕುದು. ರಿಜಿಸ್ಟ್ರಾರನು ನಿರ್ದಿಷ್ಟಪಡಿಸಬಹುದಾದಂಥ ಮೊಬಲಗನ್ನು ಅಂಥ ಪ್ರಾಧಿಕಾರಕ್ಕೆ ಮತ್ತು ಆತನು ನಿರ್ದಿಷ್ಟಪಡಿಸಿದ ಸಮಯದೊಳಗೆ ಸಂದಾಯಮಾಡಲು ಯಾವುದೇ ಸಹಕಾರ ಸಂಘವು ತಪ್ಪಿದಲ್ಲಿ, ರಿಜಿಸ್ಟ್ರಾರನು ಆ ಪ್ರಾಧಿಕರವು ಸಲ್ಲಿಸಿದ ಅರ್ಜಿಯ ಮೇಲೆ ಹಾಗೂ ತಾನು ಅವಶ್ಯವೆಂದು ಪರಿಗಣಿಸಬಹುದಾದಂಥ ವಿಚಾರಣೆ ನಡೆಸಿದ ತರುವಾಯ, ಮೊಬಲಗನ್ನು ಸಂದಾಯ ಮಾಡುವಂತೆ ಸಹಕಾರ ಸಂಘವನ್ನು ಅಗತ್ಯಪಡಿಸುವ ಆದೇಶವನ್ನು ಮಾಡಬಹುದು, ಮತ್ತು ಅಂಥ ಪ್ರತಿಯೊಂದು ಆದೇಶವು 71ನೇ ಪ್ರಕರಣದ ಮೇರೆಗಿನ ಐತೀರ್ಪು ಆಗಿದ್ದರೆ ಹೇಗೋ ಹಾಗೆ ಆ ಸಹಕಾರ ಸಂಘದ ವಿರುದ್ಧ ಜಾರಿಯೋಗ್ಯವಾಗಿರತಕ್ಕುದು."

**36. ತೊಂದರೆಗಳನ್ನು ನಿವಾರಿಸುವ ಅಧಿಕಾರ.– (1)** ಈ ಅಧಿನಿಯಮದ ಮೂಲಕ ತಿದ್ದುಪಡಿ ಮಾಡಲಾದ ಮೂಲ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುವೇ ತೊಂದರೆಗಳು ಉದ್ಭವಿಸಿದಲ್ಲಿ, ರಾಜ್ಯ ಸರ್ಕಾರವು, ರಾಜ್ಯ ಪತ್ರದಲ್ಲಿ ಅಧಿಸೂಚನೆಯನ್ನು ಹೊರಡಿಸಿ ಅಂಥ ತೊಂದರೆಗಳ ನಿವಾರಣೆಗಾಗಿ ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವಂಥ ಉಪಬಂಧಗಳನ್ನು ಮಾಡಬಹುದು:

ಪರಂತು, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 2009ರ ಅಡಿಯಲ್ಲಿಯ, ಸಂಬಂಧಪಟ್ಟ ಉಪಬಂಧಗಳು ಜಾರಿಗೆ ಬಂದ ದಿನಾಂಕದಿಂದ ಎರಡು ವರ್ಷಗಳು ಕಳೆದ ತರುವಾಯ ಈ ಪ್ರಕರಣದ ಅಡಿಯಲ್ಲಿ ಅಂಥ ಅಧಿಸೂಚನೆಯನ್ನು ಹೊರಡಿಸತಕ್ಕದ್ದಲ್ಲ.

(2) ಈ ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು, ಅದನ್ನು ಹೊರಡಿಸಿದ ಮೇಲೆ, ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸತಕ್ಕದ್ದು.

**37. ನಿರಸನ ಮತ್ತು ಉಳಿಸುವಿಕೆಗಳು.–** (1) ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧ್ಯಾದೇಶ, 2009ನ್ನು (2009ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 8) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಮೂಲಕ ತಿದ್ದುಪಡಿ ಮಾಡಲಾದ ಮೂಲ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರಲ್ಲಿಯ ನಿರ್ಬಂಧಕ ಉಪಬಂಧಗಳನ್ನು ತೆಗೆದುಹಾಕಿ, ಸಹಕಾರ ಸಂಘಗಳು ಪಾರದರ್ಶಕ, ಜವಾಬ್ದಾರಿಯುತ, ಸ್ಪಂದಿಸುವ ಮತ್ತು ಪ್ರಜಾಸತ್ತಾತ್ಮಕ ರೀತಿಯಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗುವಂತೆ ಮಾಡುವುದಕ್ಕಾಗಿ ಈ ಅಧಿನಿಯಮಕ್ಕೆ ತಿದ್ದುಪಡಿಗಳನ್ನು ಸಲಹೆ ಮಾಡಲು ಕರ್ನಾಟಕ ಸರ್ಕಾರವು 27.05.2005ರಂದು, ಈ ಮುಂದಿನ ಮೂರು ಸದಸ್ಯರನ್ನೊಳಗೊಂಡ ಸಮಿತಿಯನ್ನು ನೇಮಿಸಿತು.

1) ಶ್ರೀ ಬಿ.ಎಸ್. ವಿಶ್ವನಾಥನ್, ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ಲಿಮಿಟೆಡ್, ಬೆಂಗಳೂರು – ಇದರ ಮಾಜಿ ಅಧ್ಯಕ್ಷರು ಮತ್ತು ಹಾಲಿ ನಿರ್ದೇಶಕರು;

2) ಶ್ರೀ ಎಂ.ಸಿ. ನಾಣಯ್ಯ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಮಾಜಿ ಸಚಿವರು;

3) ಶ್ರೀ ಶಿವಾನಂದ ಪಾಟೀಲ್, ಸಮಿತಿಯ ಕಾರ್ಯದರ್ಶಿಯಾಗಿ ಸಹಕಾರ ಸಂಘಗಳ ರಿಜಿಸ್ಟ್ರಾರ್ ದೊಂದಿಗೆ ಅಧ್ಯಕ್ಷರು, ಡಿ.ಸಿ.ಸಿ. ಬ್ಯಾಂಕ್ ಲಿಮಿಟೆಡ್, ಬಿಜಾಪುರ.

ಸದರಿ ಸಮಿತಿಯು ರಾಜ್ಯದಾದ್ಯಂತ ಪ್ರವಾಸ ಮಾಡಿ ಸಹಕಾರಿ ಸಂಘಗಳೊಡನೆ ಮತ್ತು ಸಹಕಾರಿಗಳೊಂದಿಗೆ ಸಂವಾದ ಸಮಲೋಚನೆ ನಡೆಸಿತು. ಸಮಿತಿಯು ಕೆಲವು ರಾಜ್ಯಗಳನ್ನು ಸಹಾ ಸಂದರ್ಶಿಸಿತು. ಸಮಿತಿಯು 2006ರ ಫೆಬ್ರವರಿಯಲ್ಲಿ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿದೆ.

ಭಾರತ ಸರ್ಕಾರವು, ದೇಶದಲ್ಲಿ, ಅಲ್ಪಾವಧಿ ಸಹಕಾರಿ ಪತ್ತಿನ ವ್ಯವಸ್ಥೆಯ (ರಚನೆಯ) ಪುನಶ್ಚೇತನ ಕ್ರಮಗಳನ್ನು ಸಲಹೆ ಮಾಡುವುದಕ್ಕಾಗಿ ಪ್ರೊ. ಎ. ವೈದ್ಯನಾಥನ್ ರವರ ಅಧ್ಯಕ್ಷತೆಯಲ್ಲಿ 05.08.2004ರಂದು ಕಾರ್ಯಪಡೆಯನ್ನು ಸಹಾ ನೇಮಿಸಿತು. ಸದರಿ ಕಾರ್ಯಪಡೆಯು, ರಾಷ್ಟ್ರಾದ್ಯಂತ ಪ್ರವಾಸ ಕೈಗೊಂಡು, ಸಹಕಾರಿ ಸಂಘಗಳು ಮತ್ತು ಸಹಕಾರಿಗಳೊಡನೆ ಸಂವಾದ ಸಮಾಲೋಚನೆ ನಡೆಸಿ ರಾಷ್ಟ್ರದಲ್ಲಿ ಅಲ್ಪಾವಧಿ ಸಹಕಾರಿ ಪತ್ತಿನ ವ್ಯವಸ್ಥೆಯ ವಿಮರ್ಶಾತ್ಮಕ ಅಧ್ಯಯನ ಮಾಡಿ, 04.02.2005ರಂದು ಭಾರತ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿತು. ತರುವಾಯ ಭಾರತ ಸರ್ಕಾರವು, ರಾಜ್ಯ ಸರ್ಕಾರಗಳ ಪ್ರತಿನಿಧಿಗಳೊಂದಿಗೆ ಚರ್ಚೆ ನಡೆಸಿ ಪ್ರೊ. ಎ. ವೈದ್ಯನಾಥನ್ ಶಿಫಾರಸ್ಸುಗಳ ಆಧಾರದ ಮೇಲೆ ಹಾಗೂ ರಾಜ್ಯ ಸರ್ಕಾರಗಳ ಅಭಿಪ್ರಾಯಗಳನ್ನು ಪರಿಗಣಿಸಿ ಅಲ್ಪಾವಧಿ ಪತ್ತಿನ ಸಹಕಾರಿ ವ್ಯವಸ್ಥೆಗೆ ನವಚೇತನ ತುಂಬುವಂಥ ಪುನಶ್ಚೇತನ ಪ್ಯಾಕೇಜನ್ನು ರೂಪಿಸಿ 2006ರ ಜನವರಿಯಲ್ಲಿ ರಾಜ್ಯಗಳಿಗೆ ಈ ಪ್ಯಾಕೇಜಿನ ಬಗ್ಗೆ ತಿಳಿಸಿತು.

ಕರ್ನಾಟಕ ಸರ್ಕಾರವು, ಪುನಶ್ಚೇತನ ಪ್ಯಾಕೇಜನ್ನು ಒಪ್ಪಿಕೊಂಡು 25.03.2008ರಂದು ಭಾರತ ಸರ್ಕಾರ ಮತ್ತು ನಬಾರ್ಡ್‌ನೊಂದಿಗೆ ತ್ರಿಪಕ್ಷೀಯ ಒಪ್ಪಂದ ಪತ್ರಕ್ಕೆ ಸಹಿ ಹಾಕಿತು. ಸದರಿ ಒಪ್ಪಂದ ಪತ್ರವು, ಸಹಕಾರ ಸಂಘಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ಕ್ಕೆ ಕೆಲವು ತಿದ್ದುಪಡಿಗಳನ್ನು ಮಾಡಿ ಆರ್‌ಬಿಐ/ನಬಾರ್ಡ್‌ಗೆ ಕೆಲವು ಅಧಿಕಾರಗಳನ್ನು ನಿಹಿತಗೊಳಿಸಿರುವುದನ್ನು ಸ್ಪಷ್ಟಪಡಿಸಿತು. ಪ್ಯಾಕೇಜಿನಡಿಯಲ್ಲಿ ನಬಾರ್ಡ್ ಮೂಲಕವಾಗಿ ಭಾರತ ಸರ್ಕಾರವು ಹಣಕಾಸಿನ ನೆರವನ್ನು ಬಿಡುಗಡೆಗೊಳಿಸುವ ಮುಂಚೆ ತದನುಸಾರವಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ಕ್ಕೆ ತಿದ್ದುಪಡಿ ಮಾಡಬೇಕೆಂಬುದು ಒಪ್ಪಂದ ಪತ್ರದಲ್ಲಿಯ ಪೂರ್ವಷರತ್ತಾಗಿದೆ.

ಶ್ರೀ ಬಿ.ಎಸ್. ವಿಶ್ವನಾಥನ್ ಸಮಿತಿಯ ವರದಿ ಶಿಫಾರಸ್ಸುಗಳ ಮತ್ತು 25.03.2008ರಂದು ಭಾರತ ಸರ್ಕಾರದೊಂದಿಗೆ ಸಹಿಮಾಡಲಾದ ಒಪ್ಪಂದ ಪತ್ರದ ಹಾಗೂ ಆಡಳಿತಾತ್ಮಕ ಅಗತ್ಯತೆಗಳ ಹಿನ್ನಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ಈ ಮುಂದಿನಂತೆ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

1) **2ನೇ ಪ್ರಕರಣ.–** 'ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್', 'ಹಿಂದುಳಿದ ವರ್ಗ', 'ಸಹಕಾರ ಪತ್ತಿನ ವ್ಯವಸ್ಥೆ', 'ಕೇಂದ್ರ ಸಹಕಾರ ಬ್ಯಾಂಕ್', 'ಚಾರ್ಟರ್ಡ್ ಅಕೌಟೆಂಟ್', 'ವಿವಿಧೋದ್ದೇಶ ಸಹಕಾರ ಸಂಘ', 'ರಾಷ್ಟ್ರೀಯ ಬ್ಯಾಂಕ್', 'ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ', 'ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್' ಹಾಗೂ 'ರಾಜ್ಯ ಸಹಕಾರ ಬ್ಯಾಂಕ್' ಇವುಗಳ ಪರಿಭಾಷೆಗಳನ್ನು ಸೇರಿಸಲು ಪ್ರಸ್ತಾವಿಸಲಾಗಿದೆ. 'ಸಹಾಯ ಪಡೆದ ಸಂಘ' ಎಂಬ ಪರಿಭಾಷೆಯಲ್ಲಿ 'ಸರ್ಕಾರದ' ಎಂಬ ಪದಕ್ಕೆ 'ಸರ್ಕಾರದ ಅಥವಾ ರಾಜ್ಯದ' ಎಂಬ ಪದಗಳನ್ನು ಪ್ರತಿಯೋಜಿಸಲು ಪ್ರಸ್ತಾವಿಸಲಾಗಿದೆ.

2) **12ನೇ ಪ್ರಕರಣ.–** 'ಅಂಥ ಸಹಕಾರ ಸಂಘದ ಹಿತಾದೃಷ್ಟಿಯಲ್ಲಿ ಅಥವಾ ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಉಪಬಂಧಗಳನ್ನು ಜಾರಿಗೊಳಿಸಲು' ಎಂಬ ಪದಗಳನ್ನು 'ಸಹಕಾರ ಸಂಘದ ಹಿತದೃಷ್ಟಿಯಲ್ಲಿ' ಎಂಬ ಪದಗಳ ತರುವಾಯ ಸೇರಿಸುವ ಮೂಲಕ ಸ್ಪಷ್ಟಪಡಿಸಲು 12ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

3) **16ನೇ ಪ್ರಕರಣ.–,** ಸಹಕಾರ ಸಂಘದ ಪುನಶ್ಚೇತನ ಪ್ಯಾಕೆಜನ್ನು ಹಿನ್ನಲೆಯಲ್ಲಿ 'ಠೇವಣಿದಾರ ಅಥವಾ ಸ್ವಸಹಾಯ ಗುಂಪು' ಇವರುಗಳನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳಲು ಸಾಧ್ಯವಾಗುವಂತೆ ಮಾಡಲು 16ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

4) **20ನೇ ಪ್ರಕರಣ.–** 'ವ್ಯವಹಾರಗಳು' ಎಂಬುದನ್ನು 'ಮಹಾಸಭೆಯಲ್ಲಿ ಅಥವಾ ಸಮಿತಿಯ ಸದಸ್ಯರ ಚುನಾವಣೆಯಲ್ಲಿ' ಎಂಬುದಾಗಿ ಸ್ಪಷ್ಟೀಕರಿಸಲು 20ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

5) **21ನೇ ಪ್ರಕರಣ.–** 'ಮಹಾಸಭೆಯಲ್ಲಿ ಅಥವಾ ಸಮಿತಿಯ ಸದಸ್ಯರ ಚುನಾವಣೆಯಲ್ಲಿ' ಎಂಬ ಪದಗಳನ್ನು ಸೇರಿಸುವ ಮೂಲಕ ಮತ್ತು 'ಒಂದು ಫರ್ಮು' ಎಂಬ ಪದಗಳ ತರುವಾಯ, ಅಥವಾ ಒಂದು 'ಸ್ವಸಹಾಯ ಗುಂಪು' ಎಂಬ ಪದಗಳನ್ನು ಸೇರಿಸುವ ಮೂಲಕ 'ಸ್ವಸಹಾಯ ಗುಂಪು' ತನ್ನ ಪ್ರತಿನಿಧಿಯನ್ನು ಕಳುಹಿಸಲು ಅನುವು ಮಾಡಿಕೊಡಲು 21ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

6) **28ಎ ಪ್ರಕರಣ.–** ಆಡಳಿತಾಧಿಕಾರಿಯನ್ನು ಯಾವಾಗ ನೇಮಕ ಮಾಡಬೇಕು ಎಂಬುದನ್ನು ಸ್ಪಷ್ಟೀಕರಿಸಲು 28ಎ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

7) **28ಬಿ ಪ್ರಕರಣ.–** 'ಸಹಕಾರ ಪತ್ತಿನ ರಚನೆಯಲ್ಲಿಯ ಸಂಘದ ಸಂಬಂಧದಲ್ಲಿ' ನೇಮಕಗೊಂಡ ಆಡಳಿತಗಾರನ ಅವಧಿಯು ಮೂರು ತಿಂಗಳಿಗಿಂತ ಹೆಚ್ಚಿನ ಅವಧಿಯನ್ನು ಮೀರತಕ್ಕದ್ದಲ್ಲ ಎಂಬುದನ್ನು ನಿರ್ದಿಷ್ಟಪಡಿಸಲು 28ಬಿ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

8) **29ನೇ ಪ್ರಕರಣ.–** ಸರ್ಕಾರದ ನಾಮನಿರ್ದೇಶಿತನ ಕರ್ತವ್ಯಗಳನ್ನು ಹೇಳಲು 29ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

9) **29ಎ ಪ್ರಕರಣ.–** 'ಚುನಾಯಿತ' ಎಂಬ ಪದಗಳನ್ನು ಬಿಟ್ಟುಬಿಡುವ ಮೂಲಕ ಸಮಿತಿಯ ಸದಸ್ಯರ ಪದಾವಧಿಯನ್ನು ಸ್ಪಷ್ಟಪಡಿಸಲು 29ಎ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

10) **29ಸಿ ಪ್ರಕರಣ.–** ಈ ಖಂಡದಲ್ಲಿ ನಮೂದಿಸಲಾದ ಅನರ್ಹತೆಗಳನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿಗೆ ಅನ್ವಯವಾಗತಕ್ಕದ್ದಲ್ಲವೆಂದು 29ಸಿ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

11) **29ಎಫ್ ಪ್ರಕರಣ.–** ಪದಾಧಿಕಾರಿಗಳ ಚುನಾವಣೆಯ ಉದ್ದೇಶಕ್ಕಾಗಿ ನಡೆಸಿದ ಸಭೆಯಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಮತ ಚಲಾಯಿಸಲು ಹಕ್ಕನ್ನು ಹೊಂದಿರತಕ್ಕದ್ದಲ್ಲ ಎಂಬುದನ್ನು ಗೊತ್ತುಪಡಿಸಲು 29ಎಫ್ ಪ್ರಕರಣವನ್ನು ಪ್ರಸ್ತಾವಿಸಲಾಗಿದೆ.

12) **29ಜಿ ಪ್ರಕರಣ.–** ಪುನಶ್ಚೇತನ ಪ್ಯಾಕೇಜಿನ ಹಿನ್ನೆಲೆಯಲ್ಲಿ, ಸಹಕಾರ ಪತ್ತಿನ ರಚನೆಯಲ್ಲಿನ ಸಂಘವು ತನ್ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯನ್ನು ನೇಮಕ ಮಾಡಿಕೊಳ್ಳಲು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಯನ್ನು ಸಮಿತಿಯ ಸದಸ್ಯನಾಗಲು ಅನುವಾಗುವಂತೆ 29ಜಿ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

13) **30ನೇ ಪ್ರಕರಣ.–** ಪುನಶ್ಚೇತನ ಪ್ಯಾಕೇಜಿನ ಹಿನ್ನಲೆಯಲ್ಲಿ 30ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

14) **31ನೇ ಪ್ರಕರಣ.–** 'ಅಥವಾ ಯಾವುದೇ ಇತರ ಕಾರಣದಿಂದ' ಎಂಬ ಪದಗಳನ್ನು ಬಿಟ್ಟುಬಿಡುವ ಮೂಲಕ ಕೋರಂ ಇಲ್ಲದ ಸನ್ನಿವೇಶದಲ್ಲಿ ವಿಶೇಷಾಧಿಕಾರಿಯ ನೇಮಕ ಮಾಡುವ ಅಧಿಕಾರವನ್ನು ಸೀಮಿತಗೊಳಿಸುವಂತೆ ಮಾಡಲು ಹಾಗೂ ಸಹಕಾರಿ ಪತ್ತಿನ ರಚನೆಯಲ್ಲಿಯ ಸಂಘದ ಸಂಬಂಧದಲ್ಲಿ ವಿಶೇಷಾಧಿಕಾರಿಯ ಪದಾವಧಿಯು ಮೂರು ತಿಂಗಳುಗಳಿಗೆ ಮೀರದಂತೆ ಗೊತ್ತುಪಡಿಸಲು 31ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

15) **39ಎ ಪ್ರಕರಣ.–** ಸಹಕಾರ ಪತ್ತಿನ ರಚನೆಯಲ್ಲಿಯ ಸಂಘದ ಚುನಾವಣೆಗಳನ್ನು ರಾಜ್ಯ ಸರ್ಕಾರವು ಮೂರು ತಿಂಗಳುಗಳನ್ನು ಮೀರುವ ಅವಧಿಯವರೆಗೆ ಮುಂದೂಡತಕ್ಕದ್ದಲ್ಲ ಎಂಬುದನ್ನು ಗೊತ್ತುಪಡಿಸಲು 39ಎ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

16) **54ನೇ ಪ್ರಕರಣ.–** ಒಪ್ಪಂದ ಪತ್ರದ ಹಿನ್ನೆಲೆಯಲ್ಲಿ 54ನೇ ಪ್ರಕರಣವನ್ನು ಬಿಟ್ಟುಬಿಡಲು ಪ್ರಸ್ತಾವಿಸಲಾಗಿದೆ.

17) **56ನೇ ಪ್ರಕರಣ.–** ಸಹಕಾರ ಸಂಘದ ನಿಧಿಗಳನ್ನು ಸಂಗ್ರಹಿಸುವ ವಿಧಾನವನ್ನು ತಿಳಿಸಲು ಮತ್ತು ಸಮಿತಿಯ ಸದಸ್ಯರಿಗೆ ಪ್ರಯಾಣ ಭತ್ಯೆ, ದಿನಭತ್ಯೆ ಮತ್ತು ಇತರ ಭತ್ಯೆಗಳನ್ನು ಸಂದಾಯ ಮಾಡಲು ಉಪವಿಧಿಯಲ್ಲಿ ನಿರ್ದಿಷ್ಟಪಡಿಸಲು 56ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

18) **58ನೇ ಪ್ರಕರಣ.–** ರಿಸರ್ವ್ ಬ್ಯಾಂಕಿನ ನಿರ್ದೇಶನಗಳಿಗೆ ಅನುಸಾರವಾಗಿ, ರಿಸರ್ವ್ ಬ್ಯಾಂಕಿನ ನಿಯಂತ್ರಣದಲ್ಲಿರುವ ಅನುಸೂಚಿತ ಬ್ಯಾಂಕಿನಲ್ಲಿ ಅಥವಾ ಹಣಕಾಸು ಸಂಸ್ಥೆಯಲ್ಲಿ ಸಹಕಾರ ಬ್ಯಾಂಕು ತನ್ನ ನಿಧಿಗಳನ್ನು ಹೂಡಲು ಸಾಧ್ಯವಾಗುವಂತೆ 58ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

19) **59ನೇ ಪ್ರಕರಣ.–** ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದಂತೆ ಸಹಕಾರ ಸಂಘವು ಪಡೆದುಕೊಳ್ಳಬೇಕಾದ ಠೇವಣಿಗಳ ಮತ್ತು ಸಾಲಗಳ ಮಿತಿ ಸಂಬಂಧದಲ್ಲಿ ಉಪಬಂಧ ಕಲ್ಪಿಸಲು 59ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

20) **60ನೇ ಪ್ರಕರಣ.–** ರಿಜಿಸ್ಟ್ರಾರರ ಮಂಜೂರಾತಿಯಿಲ್ಲದೆ ಸಹಕಾರ ಸಂಘವು, ಇನ್ನೊಂದು ಸಹಕಾರ ಸಂಘಕ್ಕೆ ಸಾಲಗಳನ್ನು ಒದಗಿಸಲು ಸಾಧ್ಯವಾಗುವಂತೆ ಮಾಡಲು 60ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

21) **63ನೇ ಪ್ರಕರಣ.–** ಪ್ರತಿಯೊಂದು ಸಹಕಾರ ಸಂಘವು ತನ್ನ ಲೆಕ್ಕಪತ್ರಗಳನ್ನು ಪ್ರತಿವರ್ಷದಲ್ಲಿ ಲೆಕ್ಕ ಪರಿಶೋಧನೆಯನ್ನು ಮಾಡಿಸುವುದನ್ನು ಕಡ್ಡಾಯಗೊಳಿಸುವುದಕ್ಕಾಗಿ ಮತ್ತು ಲೆಕ್ಕ ಪರಿಶೋಧನೆಯ ವ್ಯಾಪ್ತಿಯನ್ನು ವಿಸ್ತರಿಸುವುದಕ್ಕಾಗಿ 63ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

22) **64ನೇ ಪ್ರಕರಣ.–** ಸಹಕಾರ ಸಂಘಕ್ಕೆ ವಿಚಾರಣಾ ವರದಿಯ ಪ್ರತಿಯು ದೊರಕುವಂತೆ ಮಾಡಲು ಮತ್ತು ಸಂಘವು ಮೂರು ತಿಂಗಳೊಳಗಾಗಿ ಅದರ ಮೇಲೆ ಕೈಗೊಂಡ ಕ್ರಮವನ್ನು ರಿಜಿಸ್ಟ್ರಾರನಿಗೆ ತಿಳಿಸಲು ಸಾಧ್ಯವಾಗುವಂತೆ 64ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

23) **65ನೇ ಪ್ರಕರಣ.–** ಸಹಕಾರ ಸಂಘವು ಪರಿಶೀಲನಾ ವರದಿಯ ಪ್ರತಿಯನ್ನು ಪಡೆಯಲು ಮತ್ತು ಸಂಘವು ಮೂರು ತಿಂಗಳೊಳಗಾಗಿ ಅದರ ಮೇಲೆ ಕೈಗೊಂಡ ಕ್ರಮವನ್ನು ರಿಜಿಸ್ಟ್ರಾರನಿಗೆ ತಿಳಿಸಲು ಸಾಧ್ಯವಾಗುವಂತೆ ಮಾಡುವುದಕ್ಕಾಗಿ 65ನೇ ಪ್ರಕರಣವನ್ನು , ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

24) **69ನೇ ಪ್ರಕರಣ.–** ಅರ್ಜಿಯನ್ನು ಆರು ತಿಂಗಳು ಆದರೆ ಹನ್ನೆರಡು ತಿಂಗಳುಗಳವರೆಗೆ ವಿಸ್ತರಿಸಬಹುದಾದಂಥ ಅವಧಿಯೊಳಗೆ, ತೀರ್ಮಾನಿಸತಕ್ಕದೆಂದು ಗೊತ್ತುಪಡಿಸಲು 69ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

25) **70ನೇ ಪ್ರಕರಣ.–** 'ಕಾರ್ಯದರ್ಶಿ, ಖಜಾಂಚಿ' ಇವರು ಸವೇತನಾ ನೌಕರರಾಗಿರುವುದರಿಂದ 'ಕಾರ್ಯದರ್ಶಿ, ಖಜಾಂಚಿ' ಎಂಬ ಪದಗಳಿಗೆ 'ಅಥವಾ ಇತರ ಯಾವೊಬ್ಬ ಪದಾಧಿಕಾರಿ' ಎಂಬ ಪದಗಳನ್ನು ಪ್ರತಿಯೋಜಿಸಲು 70ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

26) **70ಎ ಪ್ರಕರಣ.–** ಒಬ್ಬ ನೌಕರನ ವಿರುದ್ಧ ಶಿಸ್ತು ಕ್ರಮಕ್ಕೆ ಅಥವಾ ಸೇವಾ ಷರತ್ತುಗಳಿಗೆ ಸಂಬಂಧಪಟ್ಟ ವಿವಾದವನ್ನು ವ್ಯಾಜ್ಯ ಕಾರಣದ ದಿನಾಂಕದಿಂದ ಆರು ತಿಂಗಳ ಅವಧಿಯೊಳಗೆ ದಾಖಲು ಮಾಡುವುದಕ್ಕಾಗಿ ಗೊತ್ತುಪಡಿಸಲು 70ಎ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

27) **71ನೇ ಪ್ರಕರಣ.–** ವಿವಾದಗಳನ್ನು ಆರು ತಿಂಗಳೊಳಗೆ ಆದರೆ ಹನ್ನೆರಡು ತಿಂಗಳುವರೆಗೆ ವಿಸ್ತರಿಸಬಹುದಾದಂಥ ಅವಧಿಯೊಳಗೆ ತೀರ್ಮಾನಿಸತಕ್ಕದ್ದೆಂದು ಗೊತ್ತುಪಡಿಸಲು 71ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

28) **76ನೇ ಪ್ರಕರಣ.–** (ಬಿ) ಮತ್ತು (ಸಿ) ಖಂಡಗಳನ್ನು 2ನೇ ಪ್ರಕರಣದಲ್ಲಿ ಸೇರಿಸಿರುವುದರಿಂದ, ಅವುಗಳನ್ನು ಬಿಟ್ಟುಬಿಡಲು 76ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

29) **98ಎ ದಿಂದ 98ವೈ ವರೆಗಿನ ಪ್ರಕರಣಗಳು.–** ಸಹಕಾರ ಪತ್ತಿನ ವ್ಯವಸ್ಥೆಯನ್ನು ಪುನಶ್ಚೇತನಗೊಳಿಸುವುದಕ್ಕಾಗಿ, ಭಾರತ ಸರ್ಕಾರ ಮತ್ತು ನಬಾರ್ಡ್‌ನೊಡನೆ ಸಹಿ ಮಾಡಲಾದ ಒಪ್ಪಂದ ಪತ್ರದಲ್ಲಿ ತಿಳಿಸಲಾಗಿರುವಂತೆ ಸಹಕಾರ ಪತ್ತಿನ ವ್ಯವಸ್ಥೆಯಲ್ಲಿಯ ಸಂಘಗಳಿಗೆ ಅನ್ವಯವಾಗುವ ವಿಶೇಷ ಉಪಬಂಧಗಳಿಗಾಗಿ ಒಂದು ಪ್ರತ್ಯೇಕ ಅಧ್ಯಾಯವನ್ನು ಸೇರಿಸಲು ಪ್ರಸ್ತಾವಿಸಲಾಗಿದೆ.

30) **100ನೇ ಪ್ರಕರಣ.–** ಪುನಶ್ಚೇತನ ಪ್ಯಾಕೇಜಿನ ಹಿನ್ನೆಲೆಯಲ್ಲಿ, ರಿಜಿಸ್ಟ್ರಾರನ ಅನುಮೋದನೆಯನ್ನು ಬಿಟ್ಟುಬಿಡಲು 100ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

31) **105ನೇ ಪ್ರಕರಣ.–** ಬಾಕಿ ಇರುವ ಮೊಬಲಗಿನ ಶೇಕಡಾ ಐವತ್ತರಷ್ಟನ್ನು, ಅಪೀಲನ್ನು ಸಲ್ಲಿಸುವ ಮೊದಲು ಠೇವಣಿ ಇಡುವಂತೆ ಗೊತ್ತುಪಡಿಸಲು 105ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

**32) 106ನೇ ಪ್ರಕರಣ.–** 28ಎ (5), 99, 111 ಹಾಗೂ 105ಎ ಪ್ರಕರಣಗಳ ಅಡಿಯಲ್ಲಿ ಮಾಡಿದ ಆದೇಶಗಳ ವಿರುದ್ಧ ಅಪೀಲುಗಳಿಗಾಗಿ ಅವಕಾಶವನ್ನು ಕಲ್ಪಿಸುವುದು ಮತ್ತು 68ನೇ ಪ್ರಕರಣದ ಅಡಿಯಲ್ಲಿಯ ಆದೇಶದ ವಿರುದ್ಧ ಅಪೀಲನ್ನು ತೆಗೆದುಹಾಕಲು ಮತ್ತು ವಿಶೇಷವಾಗಿ ಅಪೀಲು ಪ್ರಾಧಿಕಾರಗಳನ್ನು ಗೊತ್ತುಪಡಿಸಲು 106ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ. ಬಾಕಿ ಇರುವ ಮೊಬಲಗಿನ ಶೇಕಡಾ ಐವತ್ತರಷ್ಟನ್ನು, ಅಪೀಲನ್ನು ಸಲ್ಲಿಸುವ ಮೊದಲು ಠೇವಣಿ ಇಡುವಂತೆ ಗೊತ್ತುಪಡಿಸಲು ಮತ್ತು ಅಪೀಲನ್ನು ಆರು ತಿಂಗಳೊಳಗೆ ಆದರೆ ಹನ್ನೆರಡು ತಿಂಗಳುವರೆಗೆ ವಿಸ್ತರಿಸಬಹುದಾದಂಥ ಅವಧಿಯೊಳಗೆ ತೀರ್ಮಾನಿಸತಕ್ಕದ್ದೆಂದು ಗೊತ್ತುಪಡಿಸಲು ಪ್ರಸ್ತಾವಿಸಲಾಗಿದೆ.

33) **111ನೇ ಪ್ರಕರಣ.–** ಒಪ್ಪಂದ ಪತ್ರವನ್ನು ಗಮನದಲ್ಲಿಟ್ಟುಕೊಂಡು ಸಹಕಾರ ಪತ್ತಿನ ರಚನೆಯಲ್ಲಿಯ ಸಂಘಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಸಂಬಂಧದಲ್ಲಿ, ಕ್ರಿಮಿನಲ್ ಮೊಕದ್ದಮೆಗಳನ್ನು ಹೂಡುವುದಕ್ಕಾಗಿ ರಿಜಿಸ್ಟ್ರಾರನ ಮಂಜೂರಾತಿ ಸಂಬಂಧದಲ್ಲಿ ಉಪಬಂಧ ಕಲ್ಪಿಸಲು 111ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ. ಹಣದ ದುರ್ವಿನಿಯೋಗಕ್ಕಾಗಿ ಸಂಬಂಧಪಟ್ಟವರ ವಿರುದ್ಧ ಕ್ರಿಮಿನಲ್ ದೂರುಗಳನ್ನು ದಾಖಲು ಮಾಡುವುದಕ್ಕಾಗಿ ರಿಜಿಸ್ಟ್ರಾರ್ ಅಥವಾ ಸಹಕಾರಿ ಲೆಕ್ಕಪರಿಶೋಧಕರ ಮಂಜೂರಾತಿ ಅಗತ್ಯವಿಲ್ಲವೆಂಬ ಬಗ್ಗೆ ಉಪಬಂಧ ಕಲ್ಪಸಲು ಸಹಾ ಪ್ರಸ್ತಾವಿಸಲಾಗಿದೆ

**34) 128ಎ ಪ್ರಕರಣ.–** ಕೆಲವು ಪ್ರಕರಣಗಳಲ್ಲಿ ಉಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಪಾಲಿಸುವ ಉದ್ದೇಶದಿಂದ ಮತ್ತು ಕಾಯುತ್ತಿರುವ ನೌಕರರಿಗೆ ಸ್ಥಳ ನಿಯುಕ್ತಿ ಮಾಡುವುದಕ್ಕಾಗಿ ಹಾಗೂ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ ನೌಕರರ ಅಂಥ ಇತರ ಸೇವಾ ಷರತ್ತುಗಳನ್ನು ಇತ್ಯರ್ಥಗೊಳಿಸುವುದಕ್ಕಾಗಿ 128ಎ ಪ್ರಕರಣವನ್ನು ಆರು ತಿಂಗಳವರೆಗೆ ಉಳಿಸಿಕೊಳ್ಳಲು ಪ್ರಸ್ತಾವಿಸಲಾಗಿದೆ.

ವಿಷಯವು ತುರ್ತು ಸ್ವರೂಪದಾದ್ದರಿಂದ ಮತ್ತು ಕರ್ನಾಟಕ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ಸಹಕಾರಿ ಸಂಘಗಳ (ತಿದ್ದುಪಡಿ) ಅಧ್ಯಾದೇಶ, 2009ನ್ನು (2009ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 8) ದಿನಾಂಕ 30.10.2009ರಂದು ಪ್ರಖ್ಯಾಪಿಸಲಾಯಿತು.

ಈ ವಿಧೇಯಕವನ್ನು ಸದರಿ ಅಧ್ಯಾದೇಶದ ಬದಲಿಗೆ ತರಲಾಗಿದೆ.

ಆದ್ದರಿಂದ ಈ ವಿಧೇಯಕ.

**ಕರ್ನಾಟಕ ವಿಧಾನಪರಿಷತ್ತಿನ ಕಾರ್ಯವಿಧಾನ ಮತ್ತು ನಡವಳಿಕೆಗಳ ನಿಯಮಗಳ 77ನೇ ನಿಯಮದ (1)ನೇ ಉಪನಿಯಮದ ಮೂಲಕ ಅಗತ್ಯ ಪಡಿಸಲಾದಂತೆ ವಿವರಣಾತ್ಮಕ ಹೇಳಿಕೆ**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರಲ್ಲಿಯ ನಿರ್ಬಂಧಕ ಉಪಬಂಧಗಳನ್ನು ತೆಗೆದುಹಾಕಿ, ಸಹಕಾರ ಸಂಘಗಳು ಪಾರದರ್ಶಕ, ಜವಾಬ್ದಾರಿಯುತ, ಸ್ಪಂದಿಸುವ ಮತ್ತು ಪ್ರಜಾಸತ್ತಾತ್ಮಕ ರೀತಿಯಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗುವಂತೆ ಮಾಡುವುದಕ್ಕಾಗಿ ಈ ಅಧಿನಿಯಮಕ್ಕೆ ತಿದ್ದುಪಡಿಗಳನ್ನು ಸಲಹೆ ಮಾಡಲು ಕರ್ನಾಟಕ ಸರ್ಕಾರವು 27.05.2005ರಂದು, ಈ ಮುಂದಿನ ಮೂರು ಸದಸ್ಯರನ್ನೊಳಗೊಂಡ ಸಮಿತಿಯನ್ನು ನೇಮಿಸಿತು.

1) ಶ್ರೀ ಬಿ.ಎಸ್. ವಿಶ್ವನಾಥನ್, ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ಲಿಮಿಟೆಡ್, ಬೆಂಗಳೂರು – ಇದರ ಮಾಜಿ ಅಧ್ಯಕ್ಷರು ಮತ್ತು ಹಾಲಿ ನಿರ್ದೇಶಕರು;

2) ಶ್ರೀ ಎಂ.ಸಿ. ನಾಣಯ್ಯ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಮಾಜಿ ಸಚಿವರು;

3) ಶ್ರೀ ಶಿವಾನಂದ ಪಾಟೀಲ್, ಸಮಿತಿಯ ಕಾರ್ಯದರ್ಶಿಯಾಗಿ ಸಹಕಾರ ಸಂಘಗಳ ರಿಜಿಸ್ಟ್ರಾರ್ ದೊಂದಿಗೆ ಅಧ್ಯಕ್ಷರು, ಡಿ.ಸಿ.ಸಿ. ಬ್ಯಾಂಕ್ ಲಿಮಿಟೆಡ್, ಬಿಜಾಪುರ.

ಸದರಿ ಸಮಿತಿಯು ರಾಜ್ಯದಾದ್ಯಂತ ಪ್ರವಾಸ ಮಾಡಿ ಸಹಕಾರಿ ಸಂಘಗಳೊಡನೆ ಮತ್ತು ಸಹಕಾರಿಗಳೊಂದಿಗೆ ಸಂವಾದ ಸಮಲೋಚನೆ ನಡೆಸಿತು. ಸಮಿತಿಯು ಕೆಲವು ರಾಜ್ಯಗಳನ್ನು ಸಹಾ ಸಂದರ್ಶಿಸಿತು. ಸಮಿತಿಯು 2006ರ ಫೆಬ್ರವರಿಯಲ್ಲಿ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿದೆ.

ಭಾರತ ಸರ್ಕಾರವು, ದೇಶದಲ್ಲಿ, ಅಲ್ಪಾವಧಿ ಸಹಕಾರಿ ಪತ್ತಿನ ವ್ಯವಸ್ಥೆಯ (ರಚನೆಯ) ಪುನಶ್ಚೇತನ ಕ್ರಮಗಳನ್ನು ಸಲಹೆ ಮಾಡುವುದಕ್ಕಾಗಿ ಪ್ರೊ. ಎ. ವೈದ್ಯನಾಥನ್ ರವರ ಅಧ್ಯಕ್ಷತೆಯಲ್ಲಿ 05.08.2004ರಂದು ಕಾರ್ಯಪಡೆಯನ್ನು ಸಹಾ ನೇಮಿಸಿತು. ಸದರಿ ಕಾರ್ಯಪಡೆಯು, ರಾಷ್ಟ್ರಾದ್ಯಂತ ಪ್ರವಾಸ ಕೈಗೊಂಡು, ಸಹಕಾರಿ ಸಂಘಗಳು ಮತ್ತು ಸಹಕಾರಿಗಳೊಡನೆ ಸಂವಾದ ಸಮಾಲೋಚನೆ ನಡೆಸಿ ರಾಷ್ಟ್ರದಲ್ಲಿ ಅಲ್ಪಾವಧಿ ಸಹಕಾರಿ ಪತ್ತಿನ ವ್ಯವಸ್ಥೆಯ ವಿಮರ್ಶಾತ್ಮಕ ಅಧ್ಯಯನ ಮಾಡಿ, 04.02.2005ರಂದು ಭಾರತ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿತು. ತರುವಾಯ ಭಾರತ ಸರ್ಕಾರವು, ರಾಜ್ಯ ಸರ್ಕಾರಗಳ ಪ್ರತಿನಿಧಿಗಳೊಂದಿಗೆ ಚರ್ಚೆ ನಡೆಸಿ ಪ್ರೊ. ಎ. ವೈದ್ಯನಾಥನ್ ಶಿಫಾರಸ್ಸುಗಳ ಆಧಾರದ ಮೇಲೆ ಹಾಗೂ ರಾಜ್ಯ ಸರ್ಕಾರಗಳ

ಅಭಿಪ್ರಾಯಗಳನ್ನು ಪರಿಗಣಿಸಿ ಅಲ್ಪಾವಧಿ ಪತ್ತಿನ ಸಹಕಾರಿ ವ್ಯವಸ್ಥೆಗೆ ನವಚೇತನ ತುಂಬುವಂಥ ಪುನಶ್ಚೇತನ ಪ್ಯಾಕೇಜನ್ನು ರೂಪಿಸಿ 2006ರ ಜನವರಿಯಲ್ಲಿ ರಾಜ್ಯಗಳಿಗೆ ಈ ಪ್ಯಾಕೇಜಿನ ಬಗ್ಗೆ ತಿಳಿಸಿತು.

ಕರ್ನಾಟಕ ಸರ್ಕಾರವು, ಪುನಶ್ಚೇತನ ಪ್ಯಾಕೇಜನ್ನು ಒಪ್ಪಿಕೊಂಡು 25.03.2008ರಂದು ಭಾರತ ಸರ್ಕಾರ ಮತ್ತು ನಬಾರ್ಡ್‌ನೊಂದಿಗೆ ತ್ರಿಪಕ್ಷೀಯ ಒಪ್ಪಂದ ಪತ್ರಕ್ಕೆ ಸಹಿ ಹಾಕಿತು. ಸದರಿ ಒಪ್ಪಂದ ಪತ್ರವು, ಸಹಕಾರ ಸಂಘಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ಕ್ಕೆ ಕೆಲವು ತಿದ್ದುಪಡಿಗಳನ್ನು ಮಾಡಿ ಆರ್‌ಬಿಐ/ನಬಾರ್ಡ್‌ಗೆ ಕೆಲವು ಅಧಿಕಾರಗಳನ್ನು ನಿಹಿತಗೊಳಿಸಿರುವುದನ್ನು ಸ್ಪಷ್ಟಪಡಿಸಿತು. ಪ್ಯಾಕೇಜಿನಡಿಯಲ್ಲಿ ನಬಾರ್ಡ್ ಮೂಲಕವಾಗಿ ಭಾರತ ಸರ್ಕಾರವು ಹಣಕಾಸಿನ ನೆರವನ್ನು ಬಿಡುಗಡೆಗೊಳಿಸುವ ಮುಂಚೆ ತದನುಸಾರವಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ಕ್ಕೆ ತಿದ್ದುಪಡಿ ಮಾಡಬೇಕೆಂಬುದು ಒಪ್ಪಂದ ಪತ್ರದಲ್ಲಿಯ ಪೂರ್ವಷರತ್ತಾಗಿದೆ.

ಶ್ರೀ ಬಿ.ಎಸ್. ವಿಶ್ವನಾಥನ್ ಸಮಿತಿಯ ವರದಿ ಶಿಫಾರಸ್ಸುಗಳ ಮತ್ತು 25.03.2008ರಂದು ಭಾರತ ಸರ್ಕಾರದೊಂದಿಗೆ ಸಹಿಮಾಡಲಾದ ಒಪ್ಪಂದ ಪತ್ರದ ಹಾಗೂ ಆಡಳಿತಾತ್ಮಕ ಅಗತ್ಯತೆಗಳ ಹಿನ್ನಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ಈ ಮುಂದಿನಂತೆ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

1) **2ನೇ ಪ್ರಕರಣ.–** ‘ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್’, ‘ಹಿಂದುಳಿದ ವರ್ಗ’, ‘ಸಹಕಾರ ಪತ್ತಿನ ವ್ಯವಸ್ಥೆ’, ‘ಕೇಂದ್ರ ಸಹಕಾರ ಬ್ಯಾಂಕ್’, ‘ಚಾರ್ಟರ್ಡ್ ಅಕೌಟೆಂಟ್’, ‘ವಿವಿಧೋದ್ದೇಶ ಸಹಕಾರ ಸಂಘ’, ‘ರಾಷ್ಟ್ರೀಯ ಬ್ಯಾಂಕ್’, ‘ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ’, ‘ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್’ ಹಾಗೂ ‘ರಾಜ್ಯ ಸಹಕಾರ ಬ್ಯಾಂಕ್’ ಇವುಗಳ ಪರಿಭಾಷೆಗಳನ್ನು ಸೇರಿಸಲು ಪ್ರಸ್ತಾವಿಸಲಾಗಿದೆ. ‘ಸಹಾಯ ಪಡೆದ ಸಂಘ’ ಎಂಬ ಪರಿಭಾಷೆಯಲ್ಲಿ ‘ಸರ್ಕಾರದ’ ಎಂಬ ಪದಕ್ಕೆ ‘ಸರ್ಕಾರದ ಅಥವಾ ರಾಜ್ಯದ’ ಎಂಬ ಪದಗಳನ್ನು ಪ್ರತಿಯೋಜಿಸಲು ಪ್ರಸ್ತಾವಿಸಲಾಗಿದೆ.

2) **12ನೇ ಪ್ರಕರಣ.–** ‘ಅಂಥ ಸಹಕಾರ ಸಂಘದ ಹಿತಾದೃಷ್ಟಿಯಲ್ಲಿ ಅಥವಾ ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಉಪಬಂಧಗಳನ್ನು ಜಾರಿಗೊಳಿಸಲು’ ಎಂಬ ಪದಗಳನ್ನು ‘ಸಹಕಾರ ಸಂಘದ ಹಿತದೃಷ್ಟಿಯಲ್ಲಿ’ ಎಂಬ ಪದಗಳ ತರುವಾಯ ಸೇರಿಸುವ ಮೂಲಕ ಸ್ಪಷ್ಟಪಡಿಸಲು 12ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

3) **16ನೇ ಪ್ರಕರಣ.–**, ಸಹಕಾರ ಸಂಘದ ಪುನಶ್ಚೇತನ ಪ್ಯಾಕೇಜನ್ನು ಹಿನ್ನಲೆಯಲ್ಲಿ ‘ಠೇವಣಿದಾರ ಅಥವಾ ಸ್ವಸಹಾಯ ಗುಂಪು’ ಇವರುಗಳನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳಲು ಸಾಧ್ಯವಾಗುವಂತೆ ಮಾಡಲು 16ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

4) **20ನೇ ಪ್ರಕರಣ.–** ‘ವ್ಯವಹಾರಗಳು’ ಎಂಬುದನ್ನು ‘ಮಹಾಸಭೆಯಲ್ಲಿ ಅಥವಾ ಸಮಿತಿಯ ಸದಸ್ಯರ ಚುನಾವಣೆಯಲ್ಲಿ’ ಎಂಬುದಾಗಿ ಸ್ಪಷ್ಟೀಕರಿಸಲು 20ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

5) **21ನೇ ಪ್ರಕರಣ.–** ‘ಮಹಾಸಭೆಯಲ್ಲಿ ಅಥವಾ ಸಮಿತಿಯ ಸದಸ್ಯರ ಚುನಾವಣೆಯಲ್ಲಿ’ ಎಂಬ ಪದಗಳನ್ನು ಸೇರಿಸುವ ಮೂಲಕ ಮತ್ತು ‘ಒಂದು ಫರ್ಮು’ ಎಂಬ ಪದಗಳ ತರುವಾಯ, ಅಥವಾ ಒಂದು ‘ಸ್ವಸಹಾಯ ಗುಂಪು’ ಎಂಬ ಪದಗಳನ್ನು ಸೇರಿಸುವ ಮೂಲಕ ‘ಸ್ವಸಹಾಯ ಗುಂಪು’ ತನ್ನ ಪ್ರತಿನಿಧಿಯನ್ನು ಕಳುಹಿಸಲು ಅನುವು ಮಾಡಿಕೊಡಲು 21ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

6) **28ಎ ಪ್ರಕರಣ.–** ಆಡಳಿತಾಧಿಕಾರಿಯನ್ನು ಯಾವಾಗ ನೇಮಕ ಮಾಡಬೇಕು ಎಂಬುದನ್ನು ಸ್ಪಷ್ಟೀಕರಿಸಲು 28ಎ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

7) **28ಬಿ ಪ್ರಕರಣ.–** ‘ಸಹಕಾರ ಪತ್ತಿನ ರಚನೆಯಲ್ಲಿಯ ಸಂಘದ ಸಂಬಂಧದಲ್ಲಿ’ ನೇಮಕಗೊಂಡ ಆಡಳಿತಗಾರನ ಅವಧಿಯು ಮೂರು ತಿಂಗಳಿಗಿಂತ ಹೆಚ್ಚಿನ ಅವಧಿಯನ್ನು ಮೀರತಕ್ಕದ್ದಲ್ಲ ಎಂಬುದನ್ನು ನಿರ್ದಿಷ್ಟಪಡಿಸಲು 28ಬಿ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

8) **29ನೇ ಪ್ರಕರಣ.–** ಸರ್ಕಾರದ ನಾಮನಿರ್ದೇಶಿತನ ಕರ್ತವ್ಯಗಳನ್ನು ಹೇಳಲು 29ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

9) **29ಎ ಪ್ರಕರಣ.–** ‘ಚುನಾಯಿತ’ ಎಂಬ ಪದಗಳನ್ನು ಬಿಟ್ಟುಬಿಡುವ ಮೂಲಕ ಸಮಿತಿಯ ಸದಸ್ಯರ ಪದಾವಧಿಯನ್ನು ಸ್ಪಷ್ಟಪಡಿಸಲು 29ಎ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

10) **29ಸಿ ಪ್ರಕರಣ.–** ಈ ಖಂಡದಲ್ಲಿ ನಮೂದಿಸಲಾದ ಅನರ್ಹತೆಗಳನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿಗೆ ಅನ್ವಯವಾಗತಕ್ಕದ್ದಲ್ಲವೆಂದು 29ಸಿ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

11) **29ಎಫ್ ಪ್ರಕರಣ.–** ಪದಾಧಿಕಾರಿಗಳ ಚುನಾವಣೆಯ ಉದ್ದೇಶಕ್ಕಾಗಿ ನಡೆಸಿದ ಸಭೆಯಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಮತ ಚಲಾಯಿಸಲು ಹಕ್ಕನ್ನು ಹೊಂದಿರತಕ್ಕದ್ದಲ್ಲ ಎಂಬುದನ್ನು ಗೊತ್ತುಪಡಿಸಲು 29ಎಫ್ ಪ್ರಕರಣವನ್ನು ಪ್ರಸ್ತಾವಿಸಲಾಗಿದೆ.

12) **29ಜಿ ಪ್ರಕರಣ.–** ಪುನಶ್ಚೇತನ ಪ್ಯಾಕೇಜಿನ ಹಿನ್ನೆಲೆಯಲ್ಲಿ, ಸಹಕಾರ ಪತ್ತಿನ ರಚನೆಯಲ್ಲಿನ ಸಂಘವು ತನ್ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯನ್ನು ನೇಮಕ ಮಾಡಿಕೊಳ್ಳಲು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಯನ್ನು ಸಮಿತಿಯ ಸದಸ್ಯನಾಗಲು ಅನುವಾಗುವಂತೆ 29ಜಿ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

13) **30ನೇ ಪ್ರಕರಣ.–** ಪುನಶ್ಚೇತನ ಪ್ಯಾಕೇಜಿನ ಹಿನ್ನಲೆಯಲ್ಲಿ 30ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

14) **31ನೇ ಪ್ರಕರಣ.–** 'ಅಥವಾ ಯಾವುದೇ ಇತರ ಕಾರಣದಿಂದ' ಎಂಬ ಪದಗಳನ್ನು ಬಿಟ್ಟುಬಿಡುವ ಮೂಲಕ ಕೋರಂ ಇಲ್ಲದ ಸನ್ನಿವೇಶದಲ್ಲಿ ವಿಶೇಷಾಧಿಕಾರಿಯ ನೇಮಕ ಮಾಡುವ ಅಧಿಕಾರವನ್ನು ಸೀಮಿತಗೊಳಿಸುವಂತೆ ಮಾಡಲು ಹಾಗೂ ಸಹಕಾರಿ ಪತ್ತಿನ ರಚನೆಯಲ್ಲಿಯ ಸಂಘದ ಸಂಬಂಧದಲ್ಲಿ ವಿಶೇಷಾಧಿಕಾರಿಯ ಪದಾವಧಿಯು ಮೂರು ತಿಂಗಳುಗಳಿಗೆ ಮೀರದಂತೆ ಗೊತ್ತುಪಡಿಸಲು 31ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

15) **39ಎ ಪ್ರಕರಣ.–** ಸಹಕಾರ ಪತ್ತಿನ ರಚನೆಯಲ್ಲಿಯ ಸಂಘದ ಚುನಾವಣೆಗಳನ್ನು ರಾಜ್ಯ ಸರ್ಕಾರವು ಮೂರು ತಿಂಗಳುಗಳನ್ನು ಮೀರುವ ಅವಧಿಯವರೆಗೆ ಮುಂದೂಡತಕ್ಕದ್ದಲ್ಲ ಎಂಬುದನ್ನು ಗೊತ್ತುಪಡಿಸಲು 39ಎ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

16) **54ನೇ ಪ್ರಕರಣ.–** ಒಪ್ಪಂದ ಪತ್ರದ ಹಿನ್ನೆಲೆಯಲ್ಲಿ 54ನೇ ಪ್ರಕರಣವನ್ನು ಬಿಟ್ಟುಬಿಡಲು ಪ್ರಸ್ತಾವಿಸಲಾಗಿದೆ.

17) **56ನೇ ಪ್ರಕರಣ.–** ಸಹಕಾರ ಸಂಘದ ನಿಧಿಗಳನ್ನು ಸಂಗ್ರಹಿಸುವ ವಿಧಾನವನ್ನು ತಿಳಿಸಲು ಮತ್ತು ಸಮಿತಿಯ ಸದಸ್ಯರಿಗೆ ಪ್ರಯಾಣ ಭತ್ಯೆ, ದಿನಭತ್ಯೆ ಮತ್ತು ಇತರ ಭತ್ಯೆಗಳನ್ನು ಸಂದಾಯ ಮಾಡಲು ಉಪವಿಧಿಯಲ್ಲಿ ನಿರ್ದಿಷ್ಟಪಡಿಸಲು 56ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

18) **58ನೇ ಪ್ರಕರಣ.–** ರಿಸರ್ವ್ ಬ್ಯಾಂಕಿನ ನಿರ್ದೇಶನಗಳಿಗೆ ಅನುಸಾರವಾಗಿ, ರಿಸರ್ವ್ ಬ್ಯಾಂಕಿನ ನಿಯಂತ್ರಣದಲ್ಲಿರುವ ಅನುಸೂಚಿತ ಬ್ಯಾಂಕಿನಲ್ಲಿ ಅಥವಾ ಹಣಕಾಸು ಸಂಸ್ಥೆಯಲ್ಲಿ ಸಹಕಾರ ಬ್ಯಾಂಕು ತನ್ನ ನಿಧಿಗಳನ್ನು ಹೂಡಲು ಸಾಧ್ಯವಾಗುವಂತೆ 58ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

19) **59ನೇ ಪ್ರಕರಣ.–** ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದಂತೆ ಸಹಕಾರ ಸಂಘವು ಪಡೆದುಕೊಳ್ಳಬೇಕಾದ ಠೇವಣಿಗಳ ಮತ್ತು ಸಾಲಗಳ ಮಿತಿ ಸಂಬಂಧದಲ್ಲಿ ಉಪಬಂಧ ಕಲ್ಪಿಸಲು 59ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

20) **60ನೇ ಪ್ರಕರಣ.–** ರಿಜಿಸ್ಟ್ರಾರರ ಮಂಜೂರಾತಿಯಿಲ್ಲದೆ ಸಹಕಾರ ಸಂಘವು, ಇನ್ನೊಂದು ಸಹಕಾರ ಸಂಘಕ್ಕೆ ಸಾಲಗಳನ್ನು ಒದಗಿಸಲು ಸಾಧ್ಯವಾಗುವಂತೆ ಮಾಡಲು 60ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

21) **63ನೇ ಪ್ರಕರಣ.–** ಪ್ರತಿಯೊಂದು ಸಹಕಾರ ಸಂಘವು ತನ್ನ ಲೆಕ್ಕಪತ್ರಗಳನ್ನು ಪ್ರತಿವರ್ಷದಲ್ಲಿ ಲೆಕ್ಕ ಪರಿಶೋಧನೆಯನ್ನು ಮಾಡಿಸುವುದನ್ನು ಕಡ್ಡಾಯಗೊಳಿಸುವುದಕ್ಕಾಗಿ ಮತ್ತು ಲೆಕ್ಕ ಪರಿಶೋಧನೆಯ ವ್ಯಾಪ್ತಿಯನ್ನು ವಿಸ್ತರಿಸುವುದಕ್ಕಾಗಿ 63ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

22) **64ನೇ ಪ್ರಕರಣ.–** ಸಹಕಾರ ಸಂಘಕ್ಕೆ ವಿಚಾರಣಾ ವರದಿಯ ಪ್ರತಿಯು ದೊರಕುವಂತೆ ಮಾಡಲು ಮತ್ತು ಸಂಘವು ಮೂರು ತಿಂಗಳೊಳಗಾಗಿ ಅದರ ಮೇಲೆ ಕೈಗೊಂಡ ಕ್ರಮವನ್ನು ರಿಜಿಸ್ಟ್ರಾರನಿಗೆ ತಿಳಿಸಲು ಸಾಧ್ಯವಾಗುವಂತೆ 64ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

23) **65ನೇ ಪ್ರಕರಣ.–** ಸಹಕಾರ ಸಂಘವು ಪರಿಶೀಲನಾ ವರದಿಯ ಪ್ರತಿಯನ್ನು ಪಡೆಯಲು ಮತ್ತು ಸಂಘವು ಮೂರು ತಿಂಗಳೊಳಗಾಗಿ ಅದರ ಮೇಲೆ ಕೈಗೊಂಡ ಕ್ರಮವನ್ನು ರಿಜಿಸ್ಟ್ರಾರನಿಗೆ ತಿಳಿಸಲು ಸಾಧ್ಯವಾಗುವಂತೆ ಮಾಡುವುದಕ್ಕಾಗಿ 65ನೇ ಪ್ರಕರಣವನ್ನು , ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

24) **69ನೇ ಪ್ರಕರಣ.–** ಅರ್ಜಿಯನ್ನು ಆರು ತಿಂಗಳು ಆದರೆ ಹನ್ನೆರಡು ತಿಂಗಳುಗಳವರೆಗೆ ವಿಸ್ತರಿಸಬಹುದಾದಂಥ ಅವಧಿಯೊಳಗೆ, ತೀರ್ಮಾನಿಸತಕ್ಕದೆಂದು ಗೊತ್ತುಪಡಿಸಲು 69ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

**25) 70ನೇ ಪ್ರಕರಣ.–** 'ಕಾರ್ಯದರ್ಶಿ, ಖಜಾಂಚಿ' ಇವರು ಸವೇತನಾ ನೌಕರರಾಗಿರುವುದರಿಂದ 'ಕಾರ್ಯದರ್ಶಿ, ಖಜಾಂಚಿ' ಎಂಬ ಪದಗಳಿಗೆ 'ಅಥವಾ ಇತರ ಯಾವೊಬ್ಬ ಪದಾಧಿಕಾರಿ' ಎಂಬ ಪದಗಳನ್ನು ಪ್ರತಿಯೋಜಿಸಲು 70ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

**26) 70ಎ ಪ್ರಕರಣ.–** ಒಬ್ಬ ನೌಕರನ ವಿರುದ್ಧ ಶಿಸ್ತು ಕ್ರಮಕ್ಕೆ ಅಥವಾ ಸೇವಾ ಷರತ್ತುಗಳಿಗೆ ಸಂಬಂಧಪಟ್ಟ ವಿವಾದವನ್ನು ವ್ಯಾಜ್ಯ ಕಾರಣದ ದಿನಾಂಕದಿಂದ ಆರು ತಿಂಗಳ ಅವಧಿಯೊಳಗೆ ದಾಖಲು ಮಾಡುವುದಕ್ಕಾಗಿ ಗೊತ್ತುಪಡಿಸಲು 70ಎ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

**27) 71ನೇ ಪ್ರಕರಣ.–** ವಿವಾದಗಳನ್ನು ಆರು ತಿಂಗಳೊಳಗೆ ಆದರೆ ಹನ್ನೆರಡು ತಿಂಗಳುವರೆಗೆ ವಿಸ್ತರಿಸಬಹುದಾದಂಥ ಅವಧಿಯೊಳಗೆ ತೀರ್ಮಾನಿಸತಕ್ಕದ್ದೆಂದು ಗೊತ್ತುಪಡಿಸಲು 71ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

**28) 76ನೇ ಪ್ರಕರಣ.–** (ಬಿ) ಮತ್ತು (ಸಿ) ಖಂಡಗಳನ್ನು 2ನೇ ಪ್ರಕರಣದಲ್ಲಿ ಸೇರಿಸಿರುವುದರಿಂದ, ಅವುಗಳನ್ನು ಬಿಟ್ಟುಬಿಡಲು 76ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

**29) 98ಎ ದಿಂದ 98ವೈ ವರೆಗಿನ ಪ್ರಕರಣಗಳು.–** ಸಹಕಾರ ಪತ್ತಿನ ವ್ಯವಸ್ಥೆಯನ್ನು ಪುನಶ್ಚೇತನಗೊಳಿಸುವುದಕ್ಕಾಗಿ, ಭಾರತ ಸರ್ಕಾರ ಮತ್ತು ನಬಾರ್ಡ್‌ನೊಡನೆ ಸಹಿ ಮಾಡಲಾದ ಒಪ್ಪಂದ ಪತ್ರದಲ್ಲಿ ತಿಳಿಸಲಾಗಿರುವಂತೆ ಸಹಕಾರ ಪತ್ತಿನ ವ್ಯವಸ್ಥೆಯಲ್ಲಿಯ ಸಂಘಗಳಿಗೆ ಅನ್ವಯವಾಗುವ ವಿಶೇಷ ಉಪಬಂಧಗಳಿಗಾಗಿ ಒಂದು ಪ್ರತ್ಯೇಕ ಅಧ್ಯಾಯವನ್ನು ಸೇರಿಸಲು ಪ್ರಸ್ತಾವಿಸಲಾಗಿದೆ.

**30) 100ನೇ ಪ್ರಕರಣ.–** ಪುನಶ್ಚೇತನ ಪ್ಯಾಕೇಜಿನ ಹಿನ್ನೆಲೆಯಲ್ಲಿ, ರಿಜಿಸ್ಟ್ರಾರನ ಅನುಮೋದನೆಯನ್ನು ಬಿಟ್ಟುಬಿಡಲು 100ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

**31) 105ನೇ ಪ್ರಕರಣ.–** ಬಾಕಿ ಇರುವ ಮೊಬಲಗಿನ ಶೇಕಡಾ ಐವತ್ತರಷ್ಟನ್ನು, ಅಪೀಲನ್ನು ಸಲ್ಲಿಸುವ ಮೊದಲು ಠೇವಣಿ ಇಡುವಂತೆ ಗೊತ್ತುಪಡಿಸಲು 105ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

**32) 106ನೇ ಪ್ರಕರಣ.–** 28ಎ (5), 99, 111 ಹಾಗೂ 105ಎ ಪ್ರಕರಣಗಳ ಅಡಿಯಲ್ಲಿ ಮಾಡಿದ ಆದೇಶಗಳ ವಿರುದ್ಧ ಅಪೀಲುಗಳಿಗಾಗಿ ಅವಕಾಶವನ್ನು ಕಲ್ಪಿಸುವುದು ಮತ್ತು 68ನೇ ಪ್ರಕರಣದ ಅಡಿಯಲ್ಲಿಯ ಆದೇಶದ ವಿರುದ್ಧ ಅಪೀಲನ್ನು ತೆಗೆದುಹಾಕಲು ಮತ್ತು ವಿಶೇಷವಾಗಿ ಅಪೀಲು ಪ್ರಾಧಿಕಾರಗಳನ್ನು ಗೊತ್ತುಪಡಿಸಲು 106ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ. ಬಾಕಿ ಇರುವ ಮೊಬಲಗಿನ ಶೇಕಡಾ ಐವತ್ತರಷ್ಟನ್ನು, ಅಪೀಲನ್ನು ಸಲ್ಲಿಸುವ ಮೊದಲು ಠೇವಣಿ ಇಡುವಂತೆ ಗೊತ್ತುಪಡಿಸಲು ಮತ್ತು ಅಪೀಲನ್ನು ಆರು ತಿಂಗಳೊಳಗೆ ಆದರೆ ಹನ್ನೆರಡು ತಿಂಗಳುವರೆಗೆ ವಿಸ್ತರಿಸಬಹುದಾದಂಥ ಅವಧಿಯೊಳಗೆ ತೀರ್ಮಾನಿಸತಕ್ಕದ್ದೆಂದು ಗೊತ್ತುಪಡಿಸಲು ಪ್ರಸ್ತಾವಿಸಲಾಗಿದೆ.

**33) 111ನೇ ಪ್ರಕರಣ.–** ಒಪ್ಪಂದ ಪತ್ರವನ್ನು ಗಮನದಲ್ಲಿಟ್ಟುಕೊಂಡು ಸಹಕಾರ ಪತ್ತಿನ ರಚನೆಯಲ್ಲಿಯ ಸಂಘಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಸಂಬಂಧದಲ್ಲಿ, ಕ್ರಿಮಿನಲ್ ಮೊಕದ್ದಮೆಗಳನ್ನು ಹೂಡುವುದಕ್ಕಾಗಿ ರಿಜಿಸ್ಟ್ರಾರನ ಮಂಜೂರಾತಿ ಸಂಬಂಧದಲ್ಲಿ ಉಪಬಂಧ ಕಲ್ಪಿಸಲು 111ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ. ಹಣದ ದುರ್ವಿನಿಯೋಗಕ್ಕಾಗಿ ಸಂಬಂಧಪಟ್ಟವರ ವಿರುದ್ಧ ಕ್ರಿಮಿನಲ್ ದೂರುಗಳನ್ನು ದಾಖಲು ಮಾಡುವುದಕ್ಕಾಗಿ ರಿಜಿಸ್ಟ್ರಾರ್ ಅಥವಾ ಸಹಕಾರಿ ಲೆಕ್ಕಪರಿಶೋಧಕರ ಮಂಜೂರಾತಿ ಅಗತ್ಯವಿಲ್ಲವೆಂಬ ಬಗ್ಗೆ ಉಪಬಂಧ ಕಲ್ಪಸಲು ಸಹಾ ಪ್ರಸ್ತಾವಿಸಲಾಗಿದೆ

**34) 128ಎ ಪ್ರಕರಣ.–** ಕೆಲವು ಪ್ರಕರಣಗಳಲ್ಲಿ ಉಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಪಾಲಿಸುವ ಉದ್ದೇಶದಿಂದ ಮತ್ತು ಕಾಯುತ್ತಿರುವ ನೌಕರರಿಗೆ ಸ್ಥಳ ನಿಯುಕ್ತಿ ಮಾಡುವುದಕ್ಕಾಗಿ ಹಾಗೂ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ ನೌಕರರ ಅಂಥ ಇತರ ಸೇವಾ ಷರತ್ತುಗಳನ್ನು ಇತ್ಯರ್ಥಗೊಳಿಸುವುದಕ್ಕಾಗಿ 128ಎ ಪ್ರಕರಣವನ್ನು ಆರು ತಿಂಗಳವರೆಗೆ ಉಳಿಸಿಕೊಳ್ಳಲು ಪ್ರಸ್ತಾವಿಸಲಾಗಿದೆ.

ವಿಷಯವು ತುರ್ತು ಸ್ವರೂಪದಾದ್ದರಿಂದ ಮತ್ತು ಕರ್ನಾಟಕ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ಸಹಕಾರಿ ಸಂಘಗಳ (ತಿದ್ದುಪಡಿ) ಅಧ್ಯಾದೇಶ, 2009ನ್ನು (2009ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 8) ದಿನಾಂಕ 30.10.2009ರಂದು ಪ್ರಖ್ಯಾಪಿಸಲಾಯಿತು.

ಈ ವಿಧೇಯಕವನ್ನು ಸದರಿ ಅಧ್ಯಾದೇಶದ ಬದಲಿಗೆ ತರಲಾಗಿದೆ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಲಕ್ಷ್ಮಣ್ ಎಸ್. ಸವದಿ**
ಸಹಕಾರ ಸಚಿವರು

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**ಅನುಬಂಧ**

**ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)**
**ಉದ್ಧೃತ ಭಾಗ**

**xx xx xx**

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

**xx xx xx**

(ಎ1) 'ಸಹಾಯ ಪಡೆದ ಸಂಘ' ಎಂದರೆ ಸಾಲದ ಅಥವಾ ಬಡ್ಡಿಯ ಮರುಪಾವತಿಗಾಗಿ ಸರ್ಕಾರದಿಂದ ಷೇರು ಬಂಡವಾಳದ ಅಥವಾ ಸಾಲದ ಅಥವಾ ಅನುದಾನದ ಅಥವಾ ಖಾತರಿಯ ರೂಪದಲ್ಲಿ ಸರ್ಕಾರದ ನೆರವನ್ನು ಪಡೆದುಕೊಂಡಿರುವ ಸಹಕಾರ ಸಂಘ;

**xx xx xx**

**12. ಸಹಕಾರ ಸಂಘದ ಉಪವಿಧಿಗಳ ತಿದ್ದುಪಡಿ.–** (1) **xx**

(5) ರಿಜಿಸ್ಟ್ರಾರನಿಗೆ ಸಹಕಾರ ಸಂಘದ ಹಿತದೃಷ್ಟಿಯಲ್ಲಿ ಅಂಥ ಸಂಘದ ಉಪವಿಧಿಗಳ ಯಾವುದೇ ತಿದ್ದುಪಡಿಯು ಅವಶ್ಯ ಅಥವಾ ಅಪೇಕ್ಷಣೀಯವೆಂದು ಕಂಡುಬಂದರೆ, ರಿಜಿಸ್ಟ್ರಾರನು, ಆದೇಶದ ಮೂಲಕ, ತಾನು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ತಾನು ನಿರ್ದಿಷ್ಟಪಡಿಸಿದ ಸಮಯದೊಳಗೆ ತಾನು ಪ್ರಸ್ತಾವಿಸಿದ ತಿದ್ದುಪಡಿಯನ್ನು ಮಾಡುವಂತೆ ಆ ಸಹಕಾರ ಸಂಘವನ್ನು ನಿರ್ದೇಶಿಸಬಹುದು.

**xx xx xx**

**16. ಸದಸ್ಯರಾಗಬಹುದಾದ ವ್ಯಕ್ತಿಗಳು.-** (1) 17ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು ಈ ಮುಂದಿನವನ್ನು ಹೊರತುಪಡಿಸಿ ಯಾರೇ ವ್ಯಕ್ತಿಗೆ ಸಹಕಾರ ಸಂಘದ ಸದಸ್ಯರನ್ನಾಗಿ ಪ್ರವೇಶ ನೀಡತಕ್ಕುದಲ್ಲ, ಎಂದರೆ:–

(ಎ) ಕರಾರು ಅಧಿನಿಯಮ, 1872ರ (1872ರ ಕೇಂದ್ರಾಧಿನಿಯಮ 1872ರ IX) ರ ಮೇರೆಗೆ ಕರಾರು ಮಾಡಿಕೊಳ್ಳಲು ಸಕ್ಷಮನಾದ ವ್ಯಕ್ತಿ;

**xx xx xx**

**20. ಸದಸ್ಯರ ಮತಗಳು.–** (1) ಸಹಕಾರ ಸಂಘದ ಯಾರೇ ಸದಸ್ಯನು ಸಂಘದ ವ್ಯವಹಾರಗಳಲ್ಲಿ ಒಂದಕ್ಕಿಂತ ಹೆಚ್ಚು ಮತವನ್ನು ಹೊಂದಿರತಕ್ಕುದಲ್ಲ:

**xx xx xx**

(2) ಈ ಕೆಳಕಂಡ ವ್ಯಕ್ತಿಗಳು, ತಾವು ಸದಸ್ಯರಾಗಿರುವ ಸಹಕಾರ ಸಂಘದ ಸಭೆಯಲ್ಲಿ ಮತಚಲಾಯಿಸಲು ಹಕ್ಕನ್ನು ಹೊಂದಿರತಕ್ಕುದಲ್ಲ, ಎಂದರೆ:–

**xx xx xx**

**ವಿವರಣೆ.–** ಸಂಘದ ಸದಸ್ಯನನ್ನು ಸಾಲಗಾರನಾಗಿ ಅವನು, ಅವನಿಗೆ ಹದಿನೈದು ದಿನಗಳಿಗೆ ಕಡಿಮೆಯಿಲ್ಲದ ಸಭೆಗೆ ಸಂಬಂಧಿಸಿದ ನೋಟೀಸನ್ನು ಕೊಟ್ಟ ತರುವಾಯ ಅಂಥ ಸಭೆಯ ದಿನಾಂಕಕ್ಕೆ ಕನಿಷ್ಠ ಹದಿನೈದು ದಿನಗಳಿಗೆ ಮುಂಚೆ ಸಂಘಕ್ಕೆ ತನ್ನಿಂದ ಬಾಕಿಯಿರುವ ಯಾವುದೇ ಬಗೆಯ ಬಾಕಿಗಳನ್ನು ಸಂದಾಯ ಮಾಡಲು ತಪ್ಪಿದರೆ ಆ ಬಾಕಿದಾರನೆಂದು ಭಾವಿಸತಕ್ಕುದು.

**xx xx xx**

**21. ಮತ ಚಲಾಯಿಸುವ ರೀತಿ.–** (1) ಪ್ರತಿಯೊಬ್ಬ ಸದಸ್ಯನು, ಪ್ರತಿಯೊಬ್ಬ ಪ್ರತಿನಿಧಿ ಮತ್ತು ಪ್ರತಿಯೊಬ್ಬ ನಾಮನಿರ್ದೇಶಿತನು ತನ್ನ ಮತವನ್ನು ಖುದ್ದಾಗಿ ಚಲಾಯಿಸತಕ್ಕುದು, ಆದರೆ ಪರೋಕ್ಷವಾಗಿ ಅಲ್ಲ.

2. (1)ನೆಯ ಉಪಪ್ರಕರಣದಲ್ಲಿ ಏನೇ ಇದ್ದರೂ,-

xx xx xx

(ಬಿ) ಭಾರತೀಯ ಜೀವ ವಿಮಾ ನಿಗಮವು, ರಾಜ್ಯ ಉಗ್ರಾಣ ನಿಗಮವು ಅಥವಾ ರಾಜ್ಯ ಸರ್ಕಾರ ಅನುಮೋದಿಸಿದ ಅಂಥ ಇತರ ಸಂಸ್ಥೆಗಳು ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ರಚಿಸಲಾದ ಮಾರುಕಟ್ಟೆ ಸಮಿತಿಯು ಅಥವಾ ಸ್ಥಳೀಯ ಪ್ರಾಧಿಕಾರವು ಅಥವಾ ಒಂದು ಫರ್ಮು, ಕಂಪನಿಯು ಅಥವಾ ಯಾವುದೇ ಇತರ ನಿಗಮಿತ ನಿಕಾಯವು, ಸಹಕಾರ ಸಂಘದ ಸದಸ್ಯ ಆಗಿದ್ದರೆ, ಅಂಥ ಸಂಸ್ಥೆಯು ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ರಚಿಸಲಾದ ಮಾರುಕಟ್ಟೆ ಸಮಿತಿಯು ಅಥವಾ ಸ್ಥಳೀಯ ಪ್ರಾಧಿಕಾರವು ಅಥವಾ ಫರ್ಮು, ಕಂಪನಿಯು ಅಥವಾ ಯಾವುದೇ ಇತರ ನಿಗಮಿತ ನಿಕಾಯವು ನಾಮನಿರ್ದೇಶನ ಮಾಡಿದ ವ್ಯಕ್ತಿಯು ಸಂಘದ ಕಾರ್ಯಕಲಾಪಗಳಲ್ಲಿ ಅದರ ಪರವಾಗಿ ಮತ ಚಲಾಯಿಸಬಹುದು.

xx xx xx

**28ಬಿ. ಸಮಿತಿಯು ಚುನಾವಣೆಗೆ ವ್ಯವಸ್ಥೆ ಮಾಡಬೇಕು.-** (1) xx xx

(3) 28ಎ ಪ್ರಕರಣದ (5)ನೇ ಉಪ-ಪ್ರಕರಣದ ಮೇರೆಗೆ ಅಧಿಕಾರವನ್ನು ವಹಿಸಿಕೊಳ್ಳುವ ಆಡಳಿತಾಧಿಕಾರಿಯು, ಸಾಧ್ಯವಾದಷ್ಟು ಬೇಗನೆ, ಆದರೆ ಆರು ತಿಂಗಳ ಅವಧಿಯೊಳಗೆ, ಅಧಿನಿಯಮ, ನಿಯಮಗಳು ಮತ್ತು ಉಪ ವಿಧಿಗಳಿಗನುಸಾರವಾಗಿ ಸಂಘದ ಹೊಸ ಸಮಿತಿಯ ರಚನೆಗೆ ವ್ಯವಸ್ಥೆ ಮಾಡತಕ್ಕುದು.

xx xx xx

**29ಎ. ಪದಾವಧಿಯ ಪ್ರಾರಂಭ.-** (1) ಸಮಿತಿಯ ಚುನಾಯಿತ ಸದಸ್ಯರ ಪದಾವಧಿಯು ಸಮಿತಿಯ ಚುನಾಯಿತ ಬಹುಮತ ಸದಸ್ಯರು ಅಧಿಕಾರ ವಹಿಸಿಕೊಳ್ಳುವ ದಿನಾಂಕದಂದು ಅಥವಾ ಹೊರಹೋಗುವ ಸಮಿತಿಯ ಸದಸ್ಯರ ಪದಾವಧಿಯು ಮುಕ್ತಾಯವಾದ ದಿನಾಂಕದಂದು, ಯಾವುದು ನಂತರವೋ ಅಂದು ಪ್ರಾರಂಭವಾಗತಕ್ಕುದು.

xx xx xx

**29ಸಿ. ಸಮಿತಿಯ ಸದಸ್ಯತ್ವಕ್ಕೆ ಅನರ್ಹತೆಗಳು.-** (1) ಯಾರೇ ವ್ಯಕ್ತಿಯು ಯಾವುದೇ ಸಹಕಾರ ಸಂಘದ ಸಮಿತಿಯ ಸದಸ್ಯನಾಗಿ ಚುನಾಯಿತನಾಗಲು, ಅಥವಾ ನೇಮಕಗೊಳ್ಳಲು ಅಥವಾ ಮುಂದುವರಿಯಲು,-

xx xx xx

(ಇ) ಅವನು ಅಂಥ ಸಹಕಾರ ಸಂಘದ ಅಥವಾ ಅದರ ಹಣಕಾಸು ಬ್ಯಾಂಕಿನ ವೇತನ ಪಡೆಯುವ ನೌಕರನಾಗಿದ್ದರೆ;

xx xx xx

**29ಎಫ್. ಅಧ್ಯಕ್ಷ, ಸಭಾಧ್ಯಕ್ಷ,ಉಪಾಧ್ಯಕ್ಷ ಅಥವಾ ಉಪಸಭಾಧ್ಯಕ್ಷ ಮುಂತಾದವರ ಚುನಾವಣೆ.-**

(1) xx xx xx

(4) ಮುಖ್ಯ ಕಾರ್ಯನಿರ್ವಾಹಕನು ಸಾಮಾನ್ಯ ಚುನಾವಣೆಯ ನಂತರ ಸಮಿತಿಯು ರಚನೆಯಾದ ಅಥವಾ ಹಾಗೆಂದು ಭಾವಿಸಲಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಮತ್ತು ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್ ಚೇರಮನ್ ನ ಅಧಿಕಾರಾವಧಿಯು ಮುಗಿಯುವ ನಿಕಟ ಮೊದಲು ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್‌ಚೇರ್‌ಪರ್ಸನ್, ಮತ್ತು ಸಹಕಾರ ಸಂಘದ ಉಪವಿಧಿಗಳ ಮೇರೆಗೆ ಚುನಾಯಿಸಬೇಕಾದಂಥ ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್ ಚೇರ್ ಪರ್ಸನ್ ಮತ್ತು ಇತರ ಪದಾಧಿಕಾರಿಗಳನ್ನು ಚುನಾಯಿಸುವ ಉದ್ದೇಶಕ್ಕಾಗಿ ನಿಯಮಿತ ರೀತಿಯಲ್ಲಿ ಎಲ್ಲ ಸದಸ್ಯರ ಸಭೆಯನ್ನು ಕರೆಯತಕ್ಕುದು. ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ಚೇರ್‌ಮನ್ ಸ್ಥಾನಕ್ಕೆ ಅಭ್ಯರ್ಥಿಯಾಗಿರದ ಸದಸ್ಯನನ್ನು ಅಂತಹ ಸಭೆಯ ಅಧ್ಯಕ್ಷತೆ ವಹಿಸಲು ಆಯ್ಕೆ ಮಾಡತಕ್ಕುದು:

xx xx xx

**29ಜಿ. ಮುಖ್ಯ ಕಾರ್ಯನಿರ್ವಾಹಕನ ನೇಮಕ.-** (1) ಪ್ರತಿ ಸಹಕಾರ ಸಂಘಕ್ಕೆ ಒಬ್ಬ ಮುಖ್ಯ ಕಾರ್ಯನಿರ್ವಾಹಕನು ಇರತಕ್ಕುದು, ಅವನನ್ನು 128ಎ ಪ್ರಕರಣದ ಉಪಬಂಧಗಳಿಗೊಳಪಟ್ಟು ಸಂಘದಿಂದ ನೇಮಕ ಮಾಡತಕ್ಕುದು ಮತ್ತು ವಜಾಗೊಳಿಸಬಹುದಾಗಿರತಕ್ಕುದು:

ಪರಂತು,-

(i) ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು, ನೆರವು ಪಡೆದ ಸಂಘದ ಸಂದರ್ಭದಲ್ಲಿ ಸರ್ಕಾರ ಅಥವಾ ರಿಜಿಸ್ಟ್ರಾರ್‌ನು ಮುಖ್ಯಕಾರ್ಯನಿರ್ವಾಹಕನನ್ನು ನೇಮಕ ಮಾಡುವ ಮತ್ತು ತೆಗೆದುಹಾಕುವ ಅಧಿಕಾರವನ್ನು ಹೊಂದಿರತಕ್ಕುದು; ಮತ್ತು

xx xx xx

(3) ಮುಖ್ಯ ಕಾರ್ಯನಿರ್ವಾಹಕನ ಸಂಬಳ ಮತ್ತು ಇತರ ಸೇವಾ ಷರತ್ತುಗಳು,-

(i) ಅವನು ರಾಜ್ಯ ಸರ್ಕಾರದ ನೌಕರನಾಗಿದ್ದಲ್ಲಿ ರಾಜ್ಯ ಸರ್ಕಾರದಿಂದ ಹಾಗೆ ಅನುಮೋದಿತವಾದಂತೆ ಇರತಕ್ಕುದು; ಮತ್ತು

(ii) ಇತರ ಸಂದರ್ಭಗಳಲ್ಲಿ, ರಿಜಿಸ್ಟ್ರಾರರಿಂದ ಅನುಮೋದನೆ ಪಡೆದಂತೆ ಇರತಕ್ಕುದು:

ಪರಂತು, ಸಹಕಾರ ಸಂಘಗಳ ಯಾವುದೇ ವರ್ಗಕ್ಕೆ ಸಾಮಾನ್ಯವಾದ ಮುಖ್ಯ ಕಾರ್ಯನಿರ್ವಾಹಕರ ಹುದ್ದೆಗಾಗಿ ಒಂದು ವೃಂದವನ್ನು 128ಎ ಪ್ರಕರಣದ ಮೇರೆಗೆ ಸೃಜಿಸಲಾಗಿದ್ದರೆ, ಅಂಥ ಹುದ್ದೆಗೆ ನೇಮಕಗೊಂಡ ವ್ಯಕ್ತಿಗಳ ಮತ್ತು ಅಂಥ ಸೇವೆಯನ್ನು ಸೃಜಿಸುವ ಮೊದಲೇ ನೇಮಕಗೊಂಡ ವ್ಯಕ್ತಿಗಳನ್ನು ಒಳಗೊಂಡಂತೆ ಅವರ ನೌಕರಿಭರ್ತಿ, ನೇಮಕಾತಿ ಮತ್ತು ಇತರ ಸೇವಾ ಷರತ್ತುಗಳಿಗೆ ಆ ಪ್ರಕರಣದ ಉಪಬಂಧಗಳು ಮತ್ತು ಆ ಸಂಬಂಧದಲ್ಲಿ ಮಾಡಲಾದ ವಿನಿಯಮಗಳು ಅನ್ವಯವಾಗತಕ್ಕುದು.

**xx xx xx**

(4ಎ) ಮುಖ್ಯ ಕಾರ್ಯನಿರ್ವಹಣಾಧಿಕಾರಿಯು, ಸಂಘದ ಮತ್ತು ಅದರ ಸಮಿತಿಯ ಪ್ರತಿಯೊಂದು ಸಭೆಗೆ ಹಾಜರಾಗಲು ಮತ್ತು ಚರ್ಚೆಯಲ್ಲಿ ಪಾಲ್ಗೊಳ್ಳಲು ಹಾಗೂ ಯಾವುದೇ ಗೊತ್ತುವಳಿಯನ್ನು ಮಂಡಿಸಲು ಅಥವಾ ಮತ ಚಲಾಯಿಸಲು ಹಕ್ಕುಳ್ಳವನಾಗಿರತಕ್ಕುದು.

**xx xx xx**

**30. ಸಮಿತಿಯ ರದ್ದಿಯಾತಿ.–** (1) ರಿಜಿಸ್ಟ್ರಾರನು,-

(ಎ) ಸಹಕಾರ ಸಂಘದ ಸಮಿತಿಯು, ಈ ಅಧಿನಿಯಮ ಅಥವಾ ನಿಯಮಗಳು ಅಥವಾ ಉಪವಿಧಿಗಳ ಮೂಲಕ ಅದಕ್ಕೆ ವಿಧಿಸಿದ ಕರ್ತವ್ಯಗಳ ನಿರ್ವಹಣೆಯಲ್ಲಿ ಮತ್ತೆ ಮತ್ತೆ ತಪ್ಪು ಮಾಡುತ್ತಿದೆ ಅಥವಾ ಅವುಗಳನ್ನು ಉಪೇಕ್ಷಿಸುತ್ತಿದೆ ಅಥವಾ ಸಹಕಾರ ಸಂಘದ ಅಥವಾ ಅದರ ಸದಸ್ಯರ ಹಿತಾಸಕ್ತಿಗಳಿಗೆ ಬಾಧಕವಾಗುವ ಯಾವುದೇ ಕಾರ್ಯವನ್ನು ಎಸಗಿದೆ ಅಥವಾ ಅನ್ಯಥಾ ಸರಿಯಾಗಿ ಕಾರ್ಯನಿರ್ವಹಿಸುತ್ತಿಲ್ಲವೆಂದು;

(ಬಿ) ಸಹಕಾರ ಸಂಘವು, ಈ ಅಧಿನಿಯಮ, ನಿಯಮಗಳು ಅಥವಾ ಉಪವಿಧಿಗಳ ಉಪಬಂಧಗಳು ಅಥವಾ ರಾಜ್ಯ ಸರ್ಕಾರವು ಅಥವಾ ರಿಜಿಸ್ಟ್ರಾರನು 30ಬಿ ಪ್ರಕರಣದ ಮೇರೆಗೆ ಹೊರಡಿಸಿದ ನಿರ್ದೇಶನವನ್ನೂ ಒಳಗೊಂಡಂತೆ ಯಾವುದೇ ಆದೇಶ ಅಥವಾ ನಿರ್ದೇಶನಕ್ಕೆ ಅನುಸಾರವಾಗಿ ಕಾರ್ಯನಿರ್ವಹಿಸುತ್ತಿಲ್ಲ ವೆಂದು ಅಭಿಪ್ರಾಯಪಟ್ಟರೆ, ರಿಜಿಸ್ಟ್ರಾರನು, ಆ ಸಮಿತಿಗೆ ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ತಿಳಿಸಲು ಅವಕಾಶ ನೀಡಿದ ತರುವಾಯ ಲಿಖಿತ ಆದೇಶದ ಮೂಲಕ ಸದರಿ ಸಮಿತಿಯನ್ನು ತೆಗೆದುಹಾಕಬಹುದು ಮತ್ತು ರಿಜಿಸ್ಟ್ರಾರನು ನಿರ್ದಿಷ್ಟಪಡಿಸಬಹುದಾದ ಆರು ತಿಂಗಳಿಗೆ ಮೀರದಂಥ ಅವಧಿಗಾಗಿ ಸಂಘದ ವ್ಯವಹಾರವನ್ನು ನಿರ್ವಹಿಸಲು ಒಬ್ಬ ಆಡಳಿತಗಾರನನ್ನು ನೇಮಿಸಬಹುದು. ರಿಜಿಸ್ಟ್ರಾರರು, ಬರಹದಲ್ಲಿ ಕಾರಣಗಳನ್ನು ದಾಖಲು ಮಾಡಿ ಅಂಥ ನೇಮಕಾತಿಯ ಅವಧಿಯನ್ನು ಒಮ್ಮೆಗೆ ಆರು ತಿಂಗಳುಗಳ ಮತ್ತಷ್ಟು ಅವಧಿಗೆ ವಿಸ್ತರಿಸಬಹುದು ಮತ್ತು ಯಾವುದೇ ಸಂದರ್ಭದಲ್ಲೂ ಅಂಥ ವಿಸ್ತರಣೆಯು ಸರಾಸರಿ ಒಂದು ವರ್ಷವನ್ನು ಮೀರತಕ್ಕುದಲ್ಲ.

**xx xx xx**

**31. ರಿಜಿಸ್ಟ್ರಾರ್‌ನಿಂದ ವಿಶೇಷಾಧಿಕಾರಿಯ ನೇಮಕಾತಿ.–** (1) ಅನರ್ಹತೆ, ರಾಜೀನಾಮೆ ಅಥವಾ ಮರಣ ಅಥವಾ ಸದಸ್ಯನನ್ನು ತೆಗೆದುಹಾಕುವಿಕೆ ಅಥವಾ ಯಾವುದೇ ಇತರ ಕಾರಣದಿಂದ ಕೋರಂ ಆಗಲು ಸಮಿತಿಯ ಸದಸ್ಯರುಗಳ ಸಂಖ್ಯೆಯು ಅಗತ್ಯಕ್ಕಿಂತ ಕಡಿಮೆಯಾದ ಕಾರಣದಿಂದ ಒಂದು ಸಹಕಾರ ಸಂಘವು, ಅಧಿನಿಯಮದ ಉಪಬಂಧಗಳು, ನಿಯಮಗಳು ಅಥವಾ ಉಪ ವಿಧಿಗಳಿಗನುಸಾರವಾಗಿ ಕಾರ್ಯ ನಿರ್ವಹಿಸುತ್ತಿಲ್ಲವೆಂದು ರಿಜಿಸ್ಟ್ರಾರರು ಅಭಿಪ್ರಾಯಪಟ್ಟಲ್ಲಿ, ಅವರು, ಈ ಅಧಿನಿಯಮ, ನಿಯಮ, ನಿಯಮಗಳು ಅಥವಾ ಉಪವಿಧಿಗಳಲ್ಲಿ ಏನೇ ಒಳಗೊಂಡಿದ್ದರೂ, ಆದೇಶದ ಮೂಲಕ, ಅಂತಹ ಸಹಕಾರ ಸಂಘಕ್ಕೆ ಆರು ತಿಂಗಳಿಗಿಂತ ಹೆಚ್ಚಿಲ್ಲದಂಥ ಅವಧಿಗೆ ಒಬ್ಬ ವಿಶೇಷಾಧಿಕಾರಿಯನ್ನು ನೇಮಕ ಮಾಡಬಹುದು. ರಿಜಿಸ್ಟ್ರಾರನು, ಬರಹದಲ್ಲಿ ಕಾರಣಗಳನ್ನು ಮಾಡಿ ಅಂಥ ನೇಮಕಾತಿಯ ಅವಧಿಯನ್ನು ಒಮ್ಮೆಗೆ ಆರು ತಿಂಗಳುಗಳ ಹೆಚ್ಚಿನ ಅವಧಿಗೆ ವಿಸ್ತರಿಸಬಹುದು. ಮತ್ತು ಯಾವುದೇ ಸಂದರ್ಭದಲ್ಲೂ ಅಂಥ ವಿಸ್ತರಣೆಯ ಸರಾಸರಿ ಒಂದು ವರ್ಷವನ್ನು ಮೀರತಕ್ಕದ್ದಲ್ಲ.

**xx xx xx**

**39ಎ. ಚುನಾವಣೆಗಳನ್ನು ನಡೆಸುವುದು.–** (1) **xx xx xx**

(4) ಅಭಾವ, ಬರ, ಪ್ರವಾಹ, ಅಗ್ನಿ ಅಥವಾ ಯಾವುದೇ ಇತರ ನೈಸರ್ಗಿಕ ವಿಕೋಪಗಳ ಕಾರಣಗಳಿಂದಾಗಿ ಅಥವಾ ಮಳೆಗಾಲದಿಂದಾಗಿ ಅಥವಾ ರಾಜ್ಯ ವಿಧಾನಸಭೆಯ ಅಥವಾ ವಿಧಾನ ಪರಿಷತ್ತಿನ ಅಥವಾ ಲೋಕಸಭೆಯ ಅಥವಾ ಸ್ಥಳೀಯ ಸಂಸ್ಥೆಯ ಯಾವುದೇ ಚುನಾವಣಾ ಕಾರ್ಯಕ್ರಮವು ಯಾವುದೇ ಸಂಘದ ಅಥವಾ ಸಂಘಗಳ ವರ್ಗದ ಚುನಾವಣಾ ಕಾರ್ಯಕ್ರಮಗಳು ಜೊತೆ ಜೊತೆಯಾಗಿ ನಡೆಯುವುದರಿಂದಾಗಿ ಅಥವಾ ಸಾರ್ವಜನಿಕ ಹಿತಾಸಕ್ತಿಯಿಂದಾಗಿ, ಚುನಾವಣೆಗಳು ಮುಂದೂಡಲ್ಪಟ್ಟರೆ, ರಾಜ್ಯ ಸರ್ಕಾರವು ಈ ಅಧಿನಿಯಮ ಅಥವಾ ನಿಯಮ ಅಥವಾ ಉಪವಿಧಿಗಳಲ್ಲಿ ಏನೇ ಒಳಗೊಂಡಿದ್ದರೂ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಒಮ್ಮೆಗೆ ಆರು ತಿಂಗಳುಗಳನ್ನು ಮೀರದ ಅವಧಿಗಾಗಿ ಸಂಘ ಅಥವಾ

ಸಂಘಗಳ ವರ್ಗದ ಚುನಾವಣೆಯನ್ನು ಮುಂದೂಡಬಹುದು ಮತ್ತು ಯಾವುದೇ ಸಂದರ್ಭದಲ್ಲೂ ಅದು ಸರಾಸರಿ ಎರಡು ವರ್ಷಗಳನ್ನು ಮೀರಕೂಡದು.

xx xx xx

**54. ನೆರವು ನೀಡಲಾದ ಸಂಘದ ನಿಯಂತ್ರಣ.-** ಎರಡು ಲಕ್ಷ ರೂಪಾಯಿಗಳಿಗಿಂತ ಕಡಿಮೆಯಿಲ್ಲದ ಮೊಬಲಗಿನ ರಾಜ್ಯ ನೆರವನ್ನು ಯಾವುದೇ ಸಹಕಾರ ಸಂಘಕ್ಕೆ ಕೊಟ್ಟಿರುವಲ್ಲಿ, ರಾಜ್ಯದ ಹಿತಾಸಕ್ತಿಯ ರಕ್ಷಣೆಗಾಗಿ ಸಾಕಷ್ಟಾಗುವುದೆಂದು ರಾಜ್ಯ ಸರ್ಕಾರವು ಅಭಿಪ್ರಾಯಪಡುವಂಥ ನಿಯಂತ್ರಣವನ್ನು ಅಂಥ ಸಂಘದ ವ್ಯವಹಾರಗಳ ನಿರ್ವಹಣೆಯ ಮೇಲೆ ಚಲಾಯಿಸಲು ಅಧಿಕಾರವನ್ನು ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಸಾರ್ವಜನಿಕ ಹಿತದೃಷ್ಟಿಯಿಂದ ತೆಗೆದುಕೊಳ್ಳುವುದು ಅಗತ್ಯವೆಂದು ರಾಜ್ಯಸರ್ಕಾರಕ್ಕೆ ಮನದಟ್ಟಾದರೆ ಅದು ಹಾಗೆ ಮಾಡಬಹುದು.

xx xx xx

**56. ನಿಧಿಗಳನ್ನು ವಿಭಾಗಿಸದಿರುವುದು.-** ಸಹಕಾರ ಸಂಘದ ನಿವ್ವಳ ಲಾಭಗಳನ್ನುಳಿದು ಅದರ ನಿಧಿಗಳ ಯಾವುದೇ ಭಾಗವನ್ನು ಬೋನಸ್ಸು ಅಥವಾ ಲಾಭಾಂಶದ ರೂಪದಲ್ಲಿ ಸಂದಾಯಮಾಡತಕ್ಕುದಲ್ಲ ಅಥವಾ ಅನ್ಯಥಾ ಅದರ ಸದಸ್ಯರಿಗೆ ಹಂಚಿಕೊಡತಕ್ಕುದಲ್ಲ:

ಪರಂತು, ಯಾರೇ ಸದಸ್ಯನಿಗೆ, ಸಹಕಾರ ಸಂಘಕ್ಕೆ ಅವನು ಸಲ್ಲಿಸಿದ ಯಾವುವೇ ಸೇವೆಗಳಿಗಾಗಿ ಉಪವಿಧಿಗಳ ಮೂಲಕ ಗೊತ್ತುಪಡಿಸಬಹುದಾದಂಥ ಪರಿಶ್ರಮಧನ, ಭತ್ಯಗಳು ಅಥವಾ ಗೌರವಧನವನ್ನು ಸಂದಾಯಮಾಡಬಹುದು:

[ಮತ್ತೂ ಪರಂತು, ಯಾರೇ ಸದಸ್ಯನಿಗೆ ಸಮಿತಿಗಳ ಸಭೆಗಳಿಗೆ ಹಾಜರಾದ ಬಗ್ಗೆ ಅಥವಾ ಸದಸ್ಯನಾಗಿ ಇತರ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಿದ ಬಗ್ಗೆ ಆ ಉದ್ದೇಶಕ್ಕಾಗಿ ನಿಯಮಿಸಲಾದ ಗರಿಷ್ಠ ದರಕ್ಕಿಂತ ಹೆಚ್ಚಿನ ದರದಲ್ಲಿ ಪ್ರಯಾಣಭತ್ಯ, ದಿನಭತ್ಯ ಅಥವಾ ಅಂಥ ಇತರ ಭತ್ಯಗಳನ್ನು ಅಥವಾ ಫೀಜುಗಳನ್ನು ಸಂದಾಯ ಮಾಡತಕ್ಕುದಲ್ಲ ಮತ್ತು ಸಹಕಾರ ಸಂಘಗಳ ವಿವಿಧ ವರ್ಗಗಳಿಗಾಗಿ ಅಥವಾ ವಿವಿಧ ಉದ್ದೇಶಗಳಿಗಾಗಿ ವಿವಿಧ ದರಗಳನ್ನು ನಿಯಮಿಸಬಹುದು.

xx xx xx

**58. ನಿಧಿಗಳ ಹೂಡಿಕೆ.-** ಸಹಕಾರ ಸಂಘವು ತನ್ನ ನಿಧಿಗಳನ್ನು -

xx xx xx

(ಇ) ರಿಜಿಸ್ಟ್ರಾರನಿಂದ ಅನುಮೋದಿತವಾದ ಯಾವುದೇ ಷೆಡ್ಯೂಲ್ಡ್ ಬ್ಯಾಂಕ್‌ನಲ್ಲಿ:

ಪರಂತು, ಸಹಕಾರ ಬ್ಯಾಂಕು ಅದರ ನಿಯತ ವ್ಯವಹಾರದ ನಿರ್ವಹಣೆಗಾಗಿ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನಲ್ಲಿ ಚಾಲ್ತಿ ಖಾತೆಯನ್ನು ತೆರೆಯಲು ಅಂಥ ಯಾವ ಅನುಮೋದನೆಯ ಅಗತ್ಯ ಇರತಕ್ಕುದಲ್ಲ.][1]

xx xx xx

**59. ಎರವಲುಗಳ ಮೇಲೆ ನಿರ್ಬಂಧಗಳು:-** (1) ಸಹಕಾರ ಸಂಘವು, ನಿಯಮಿಸಬಹುದಾದಷ್ಟರ ಅಥವಾ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಷ್ಟರ ಮಟ್ಟಿಗೆ ಮತ್ತು ಅಂಥ ಷರತ್ತುಗಳಿಗೊಳಪಟ್ಟು ಮಾತ್ರವೇ ಠೇವಣಿಗಳನ್ನು ಮತ್ತು ಸಾಲಗಳನ್ನು ಸ್ವೀಕರಿಸತಕ್ಕುದು.

xx xx xx

**60. ಸಾಲಗಳ ಮೇಲೆ ನಿರ್ಬಂಧಗಳು.-** (1) ಸಹಕಾರ ಸಂಘವು ಸದಸ್ಯನನ್ನು ಹೊರತುಪಡಿಸಿ ಯಾರೇ ವ್ಯಕ್ತಿಗೆ ಸಾಲ ಕೊಡತಕ್ಕುದಲ್ಲ:

ಪರಂತು, ರಿಜಿಸ್ಟ್ರಾರನ ಸಾಮಾನ್ಯ ಅಥವಾ ವಿಶೇಷ ಮಂಜೂರಾತಿ ಪಡೆದು, ಸಹಕಾರ ಸಂಘವು ಇತರ ಸಹಕಾರ ಸಂಘಕ್ಕೆ ಸಾಲಗಳನ್ನು ಕೊಡಬಹುದು.

xx xx xx

**63. ಲೆಕ್ಕ ಪರಿಶೋಧನೆ.-** (1) ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು, ಪ್ರತಿಯೊಂದು ಸಹಕಾರ ಸಂಘದ ಲೆಕ್ಕಪತ್ರಗಳನ್ನು ಪ್ರತಿವರ್ಷ ಕಡೇಪಕ್ಷ ಒಂದು ಬಾರಿಯಾದರೂ ಪರಿಶೋಧನೆ ಮಾಡತಕ್ಕುದು ಅಥವಾ ಈ ಬಗ್ಗೆ ವಿಶೇಷ ಅಥವಾ ಸಾಮಾನ್ಯ ಲಿಖಿತ ಆದೇಶದ ಮೂಲಕ ಅವನು ಅಧಿಕೃತಗೊಳಿಸಿರುವ ವ್ಯಕ್ತಿಯಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕುದು.

(2) (1)ನೇ ಉಪಪ್ರಕರಣದ ಮೇರೆಗಿನ ಲೆಕ್ಕ ಪರಿಶೋಧನೆಯು, ಅವಧಿಮೀರಿದ ಋಣಗಳು ಯಾವುದಾದರೂ ಇದ್ದರೆ, ಅವುಗಳ ಪರೀಕ್ಷೆ, ನಗದು ಶಿಲ್ಕಿನ ಮತ್ತು ಭದ್ರತಾ ಪತ್ರಗಳ ಪರಿಶೀಲನೆ, ಆಸ್ತಿಗಳ ಮತ್ತು ಹೊಣೆಗಳ ಮೌಲ್ಯ ನಿಗದಿ ಮತ್ತು ಸಂಘದ ಕಾರ್ಯನಿರ್ವಹಣೆಯ ಮತ್ತು ನಿಯಮಿಸಲಾದ ಇತರ ವಿವರಗಳ ಪರೀಕ್ಷೆ ಇವುಗಳನ್ನು ಒಳಗೊಂಡಿರತಕ್ಕುದು.

(3) ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು ಅಥವಾ ಅಧಿಕೃತಗೊಂಡ ವ್ಯಕ್ತಿಗೆ ಸಂಘಕ್ಕೆ ಸೇರಿದ ಮತ್ತು ಅದರ ಅಭಿರಕ್ಷೆಯಲ್ಲಿರುವ ಎಲ್ಲಾ ಪುಸ್ತಕಗಳನ್ನು, ಲೆಕ್ಕಪತ್ರಗಳನ್ನು, ದಸ್ತಾವೇಜುಗಳನ್ನು, ಕಾಗದಪತ್ರಗಳನ್ನು, ಭದ್ರತಾ ಪತ್ರಗಳನ್ನು, ನಗದು

ಹಣವನ್ನು ಮತ್ತು ಇತರ ಸ್ವತ್ತುಗಳನ್ನು ಎಲ್ಲಾ ಕಾಲಗಳಲ್ಲಿ ಪರಿಶೀಲಿಸುವ ಅವಕಾಶವಿರತಕ್ಕುದು ಮತ್ತು ಅವನು ಅಂಥ ಯಾವುವೇ ಪುಸ್ತಕಗಳನ್ನು, ಲೆಕ್ಕಪತ್ರಗಳನ್ನು, ನಗದು ಹಣವನ್ನು ಅಥವಾ ಇತರ ಸ್ವತ್ತುಗಳನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿರುವ ಅಥವಾ ಅವುಗಳ ಅಭಿರಕ್ಷೆಗೆ ಹೊಣೆಗಾರನಾಗಿರುವ ಯಾರೇ ವ್ಯಕ್ತಿಯನ್ನು ಸಂಘದ ಕೇಂದ್ರ ಕಾರ್ಯಸ್ಥಾನದ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ಅಥವಾ ಅದರ ಯಾವುದೇ ಶಾಖೆಯಲ್ಲಿ ಹಾಜರುಪಡಿಸುವಂತೆ ಸಮನು ಮಾಡಬಹುದು.

(4) ಸಂಘದ ಅಧಿಕಾರಿ ಅಥವಾ ನೌಕರನಾಗಿರುವ ಅಥವಾ ಯಾವುದೇ ಕಾಲದಲ್ಲಿ ಆಗಿದ್ದ ಪ್ರತಿಯೊಬ್ಬ ವ್ಯಕ್ತಿಯು, ಮತ್ತು ಸಂಘದ ಪ್ರತಿಯೊಬ್ಬ ಸದಸ್ಯನು ಮತ್ತು ಮಾಜಿ ಸದಸ್ಯನು, ಸಂಘದ ವ್ಯವಹಾರ ಮತ್ತು ಕಾರ್ಯನಿರ್ವಹಣೆಯ ಬಗ್ಗೆ ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು ಅಥವಾ ಅಧಿಕೃತಗೊಂಡ ವ್ಯಕ್ತಿಯು ಅಗತ್ಯಪಡಿರುವಂಥ ಮಾಹಿತಿಯನ್ನು ಒದಗಿಸತಕ್ಕುದು.

**xx xx xx**

(6) ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನು ಅಥವಾ ಅವನಿಂದ ಅಧಿಕೃತನಾದ ಯಾರೇ ಅಧಿಕಾರಿಯು, ಸಹಕಾರ ಸಂಘದ ವಾರ್ಷಿಕ ಮಹಾಸಭೆಗೆ ಸಂಬಂಧಿಸಿದ ಎಲ್ಲ ನೋಟೀಸುಗಳನ್ನು ಮತ್ತು ಪ್ರತಿಯೊಂದು ಮಾಹಿತಿಯನ್ನು ಸ್ವೀಕರಿಸಲು ಮತ್ತು ಅಂತಹ ಸಭೆಗೆ ಹಾಜರಾಗಲು ಮತ್ತು ಲೆಕ್ಕಪರಿಶೋಧಕನಾಗಿ ತನಗೆ ಸಂಬಂಧಪಟ್ಟಿರುವ ಯಾವುದೇ ಕಾರ್ಯಕ್ಕೆ ಸಂಬಂಧಪಟ್ಟಂತೆ ಅಲ್ಲಿ ಅಹವಾಲು ಆಲಿಸಲು ಹಕ್ಕುಳ್ಳವನಾಗಿರತಕ್ಕುದು.

**xx xx xx**

**64. ರಿಜಿಸ್ಟ್ರಾರನಿಂದ ವಿಚಾರಣೆ.**– (1) **xx xx xx**

(4) ಈ ಪ್ರಕರಣದ ಮೇರೆಗೆ ವಿಚಾರಣೆಯನ್ನು ನಡೆಸಿರುವಲ್ಲಿ, ರಿಜಿಸ್ಟ್ರಾರನು ಆ ವಿಚಾರಣೆಯ ಫಲಿತಾಂಶವನ್ನು ಆ ಸಂಘಕ್ಕೆ ಮತ್ತು ಆ ಸಂಘವು ಸಂಯೋಜಿತವಾದ ಸಹಕಾರ ಸಂಘವು ಯಾವುದಾದರೂ ಇದ್ದರೆ ಅದಕ್ಕೆ ಮತ್ತು ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಸಹ ತಿಳಿಸತಕ್ಕುದು.

**65. ಸಹಕಾರ ಸಂಘದ ಪುಸ್ತಕಗಳ ಪರಿಶೀಲನೆ.**– (1) **xx**

(2) ರಿಜಿಸ್ಟ್ರಾರನು, ಅಂಥ ಯಾವುದೇ ಪರಿಶೀಲನೆಯ ಫಲಿತಾಂಶವನ್ನು ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕನಿಗೆ ಮತ್ತು –

(ಎ) ಪರಿಶೀಲನೆಯನ್ನು ಸ್ವಇಚ್ಛೆಯಿಂದ ಮಾಡಿರುವಲ್ಲಿ, ಸಂಘಕ್ಕೆ; ಮತ್ತು

(ಬಿ) ಪರಿಶೀಲನೆಯನ್ನು ಲೇಣೀದಾರನ ಅರ್ಜಿಯ ಮೇಲೆ ಮಾಡಿರುವಲ್ಲಿ, ಲೇಣೀದಾರನಿಗೆ ಮತ್ತು ಆ ಸಂಘಕ್ಕೆ ತಿಳಿಸತಕ್ಕುದು.

**xx xx xx**

**70. ತೀರ್ಮಾನಕ್ಕಾಗಿ ರಿಜಿಸ್ಟ್ರಾರನಿಗೆ ಉಲ್ಲೇಖಿಸಬಹುದಾದ ವಿವಾದಗಳು.**– **xx xx xx**

(2) (1)ನೇ ಉಪಪ್ರಕರಣದ ಉದ್ದೇಶಗಳಿಗಾಗಿ ಈ ಕೆಳಕಂಡ ವಿವಾದಗಳನ್ನು ಸಹಕಾರ ಸಂಘದ ರಚನೆ, ವ್ಯವಸ್ಥಾಪನೆ ಅಥವಾ ವ್ಯವಹಾರಕ್ಕೆ ಸಂಬಂಧಪಟ್ಟ ವಿವಾದಗಳೆಂದು ಭಾವಿಸತಕ್ಕುದು, ಎಂದರೆ:–

**xx xx xx**

(ಸಿ) ಸಂಘದ ಸಮಿತಿಯ ಅಧ್ಯಕ್ಷ, ಉಪಾಧ್ಯಕ್ಷ, ಸಭಾಪತಿ, ಉಪಸಭಾಪತಿ, ಕಾರ್ಯದರ್ಶಿ, ಖಜಾಂಚಿ ಅಥವಾ ಸದಸ್ಯನ ಚುನಾವಣೆಗೆ ಸಂಬಂಧಿಸಿ ಉದ್ಭವಿಸಿದ ಯಾವುದೇ ವಿವಾದ;

**xx xx xx**

**70ಎ. ಕಾಲಪರಿಮಿತಿಯ ಅವಧಿ.**– (1) 70ನೇ ಪ್ರಕರಣದ ಮೇರೆಗಿನ ಯಾವುದೇ ವಿವಾದವನ್ನು, ಅದನ್ನು ವ್ಯಾಜ್ಯ ಕಾರಣದ ದಿನಾಂಕದಿಂದ ಆರು ವರ್ಷಗಳ ಒಳಗೆ ರಿಜಿಸ್ಟ್ರಾರನಿಗೆ ಉಲ್ಲೇಖಿಸಿದ್ದ ಹೊರತು, ಅಂಗೀಕರಿಸತಕ್ಕುದಲ್ಲ:

ಪರಂತು, ಸಮಿತಿಯ ಸದಸ್ಯ, ಅಧ್ಯಕ್ಷ, ಉಪಾಧ್ಯಕ್ಷ, ವ್ಯವಸ್ಥಾಪಕ ನಿರ್ದೇಶಕ, ಗೌರವ ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಚುನಾವಣೆಗೆ ಸಂಬಂಧಿಸಿದ ವಿವಾದವನ್ನು ಚುನಾವಣೆಯ ಫಲಿತಾಂಶವನ್ನು ಘೋಷಿಸಿದ ದಿನಾಂಕದಿಂದ ಮೂವತ್ತು ದಿನಗಳ ಒಳಗೆ ರಿಜಿಸ್ಟ್ರಾರನಿಗೆ ಉಲ್ಲೇಖಿಸತಕ್ಕುದು.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯ ತರುವಾಯ ಉಲ್ಲೇಖಿಸಿದ ವಿವಾದವನ್ನು, ಆ ಅವಧಿಯ ಒಳಗೆ ಅದನ್ನು ಉಲ್ಲೇಖಿಸದಿರಲು ಉಲ್ಲೇಖಿಸುವ ವ್ಯಕ್ತಿಗೆ ಸಾಕಷ್ಟು ಕಾರಣಗಳು ಇದ್ದುವೆಂದು ರಿಜಿಸ್ಟ್ರಾರನಿಗೆ ಮನದಟ್ಟಾದರೆ, ಅವನು ಅಂಗೀಕರಿಸಬಹುದು.

**xx xx xx**

**76. ಪರಿಭಾಷೆಗಳು.**- ಈ ಅಧ್ಯಾಯದಲ್ಲಿ - **xx xx xx**

(ಬಿ) 'ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು' ಎಂದರೆ ಈ ಅಧಿನಿಯಮದ ಮೇರೆಗೆ ನೋಂದಾಯಿತವಾದ ಅಥವಾ ನೋಂದಾಯಿತವಾಗಿರುವುದಾಗಿ ಭಾವಿಸಲಾದ ಮತ್ತು ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಸದಸ್ಯನಾಗಿ ಪ್ರವೇಶಪಡೆದ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ಮತ್ತು ಅದು ರಿಜಿಸ್ಟ್ರಾರನು ಅಧಿಸೂಚಿಸಿ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಸದಸ್ಯರೆಂದು ಪ್ರವೇಶ ನೀಡಬಹುದಾದಂಥ ಸಹಕಾರ ಸಂಘಗಳ ವರ್ಗ ಅಥವಾ ವರ್ಗಗಳನ್ನು ಒಳಗೊಳ್ಳುತ್ತದೆ;

(ಸಿ) 'ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು' ಎಂದರೆ, ಕರ್ನಾಟಕ ಕೇಂದ್ರ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ನಿಯಮಿತ;

**xx xx xx**

**100. ಸಂಘಗಳಿಗೆ ಬಾಕಿ ಇರುವ ಹಣಗಳ ವಸೂಲಿ.**-(1) **xx xx**

(3) ಡೆಪ್ಯುಟಿ ಕಮಿಷನರನು, ಸಂಘಕ್ಕೆ ಸಲ್ಲತಕ್ಕ ಬಾಕಿಗಳನ್ನು, ಬಡ್ಡಿಯ ಮತ್ತು ಅಂಥ ಬಾಕಿಗಳ ವಸೂಲಿಗಾಗಿ ವಹಿಸಿದ ಯಾವುದೇ ಆನುಷಂಗಿಕ ಚಾರ್ಜುಗಳ ಸಹಿತ ಸಂದಾಯ ಮಾಡುವವರೆಗೆ ಅಥವಾ ಅಂಥ ಬಾಕಿಗಳ ಸಂದಾಯಕ್ಕಾಗಿ ರಿಜಿಸ್ಟ್ರಾರನಿಗೆ ಮನದಟ್ಟಾಗುವ ಭದ್ರತೆಯನ್ನು ಒದಗಿಸುವವರೆಗೆ, ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ 188ನೇ ಪ್ರಕರಣದ ಮೂಲಕ ಅಧಿಕೃತಗೊಳಿಸಿದ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಳ್ಳುವುದು ಕಾನೂನುಸಮ್ಮತವಾಗಿರತಕ್ಕುದು.

ವಿವರಣೆ.- ಈ ಪ್ರಕರಣದ ಉದ್ದೇಶಕ್ಕಾಗಿ,-

(i) "ಅನುಮೋದಿತ ಸಂಘ" ಎಂದರೆ ಈ ಪ್ರಕರಣದ ಉದ್ದೇಶಗಳಿಗಾಗಿ ನಿಯಮಗಳ ಮೂಲಕ ಅನುಮೋದಿತ ಸಂಘಗಳೆಂದು ಘೋಷಿಸಲಾದ ಸಂಘ ಅಥವಾ ಸಂಘಗಳ ಅಂಥ ವರ್ಗ;

(ii) "ಬೆಳೆಗಳಿಗೆ ಹಣ ಒದಗಿಸುವುದು" ಎಂದರೆ ಉಳುವ ಹಂಗಾಮಿನಲ್ಲಿ ಬೆಳೆ ತೆಗೆಯಲು ಅಥವಾ ಆ ತರುವಾಯ ಉಳಲು, ಕಳೆ ಕೀಳಲು, ಕುಯಿಲು ಮಾಡಲು, ಬೀಜಗಳು ಮತ್ತು ಗೊಬ್ಬರ ಖರೀದಿ ಮಾಡಲು ಅಥವಾ ರಿಜಿಸ್ಟ್ರಾರನು ನಿಯಮಿಸಬಹುದಾದಂಥ ಇತರ ಉದ್ದೇಶಗಳಿಗೆ ಕೊಡಲಾಗುವ ಮತ್ತು ಯಾವ ಬೆಳೆಗಳ ಸಲುವಾಗಿ ಸಾಲ ನೀಡಲಾಗಿದೆಯೋ ಆ ಬೆಳೆಗಳ ಸುಗ್ಗಿಯ ಹಂಗಾಮಿನಲ್ಲಿ ಮರುಸಂದಾಯವಾಗತಕ್ಕಂಥ ಸಾಲಗಳ ನೀಡಿಕೆ;

(iii) "ಹಂಗಾಮು ನಿಮಿತ್ತ ಹಣ ಒದಗಿಸುವುದು" ಎಂದರೆ ರಿಜಿಸ್ಟ್ರಾರನು ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಉದ್ದೇಶಗಳಿಗಾಗಿ ಕೊಡಲಾಗುವ ಮತ್ತು ಮಾರ್ಚ್ 31 ರಂದು ಅಥವಾ ಅದಕ್ಕೆ ಮುಂಚೆ ಅಥವಾ ರಿಜಿಸ್ಟ್ರಾರನು ಅಂಥವೇ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಂದು ಅಥವಾ ಅದಕ್ಕೆ ಮುಂಚೆ ಮರುಸಂದಾಯವಾಗ ಬೇಕಾದಂಥ ಸಾಲಗಳನ್ನು ನೀಡುವುದು.

**xx xx xx**

**105. ನ್ಯಾಯಾಧಿಕರಣಕ್ಕೆ ಅಪೀಲುಗಳು.**- ಯಾರೇ ವ್ಯಕ್ತಿಯು,-

(ಎ) 71ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಯಾವುದೇ ತೀರ್ಮಾನದಿಂದ; ಅಥವಾ

(ಬಿ) 71ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದ ಮೇರೆಗೆ ಸರ್ಕಾರವು ಆ ಬಗ್ಗೆ ಅಧಿಕಾರಗಳನ್ನು ನಿಹಿತಗೊಳಿಸಿದ ವ್ಯಕ್ತಿಯ ಯಾವುದೇ ತೀರ್ಮಾನದಿಂದ;

(ಸಿ) 71ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ) ಖಂಡದ ಮೇರೆಗೆ ಮಧ್ಯಸ್ಥಗಾರನ ಯಾವುದೇ ಐತೀರ್ಪಿನಿಂದ; ಅಥವಾ

(ಡಿ) 74ನೇ ಪ್ರಕರಣದ (2)ನೇ ಉಪಪ್ರಕರಣದ (ಎಫ್) ಖಂಡದ ಮೇರೆಗೆ ಸಮಾಪಕನ ಯಾವುದೇ ನಿರ್ಧಾರದಿಂದ;

(ಇ) 69ನೇ ಮತ್ತು 71ನೇ ಪ್ರಕರಣದ ಮೇರೆಗೆ ಮಾಡಬಹುದಾದ ಯಾವುದೇ ಆದೇಶದ, ತೀರ್ಮಾನದ ಅಥವಾ ಐತೀರ್ಪಿನ ಜಾರಿಗೆ][1] ಆದ ಯಾವುದೇ ವಿಳಂಬವನ್ನು ಅಥವಾ ಅಡ್ಡಿಯನ್ನು ಪ್ರತಿಬಂಧಿಸುವ ದೃಷ್ಟಿಯಿಂದ 103ನೇ ಪ್ರಕರಣದ ಮೇರೆಗೆ ಮಾಡಲಾದ ಯಾವುದೇ ಆದೇಶದಿಂದ;

(ಎಫ್) 69ನೇ ಪ್ರಕರಣದ ಮೇರೆಗೆ ಮಾಡಲಾದ ಯಾವುದೇ ಆದೇಶದಿಂದ ಬಾಧಿತನಾದರೆ, ಸಂದರ್ಭಾನುಸಾರ ತೀರ್ಮಾನ, ಐತೀರ್ಪು ಅಥವಾ ಆದೇಶದ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ ನ್ಯಾಯಾಧಿಕರಣಕ್ಕೆ ಅಪೀಲು ಸಲ್ಲಿಸಬಹುದು.

**xx xx xx**

(b) if the act, decision or order was made by any other officer, to that officer's immediate superior officer;

Provided that where the act, decision or order was made by the superior officer himself, the appeal shall lie to the next higher officer or authority and, if pending shall stand transferred to and be disposed by such next higher officer or authority.

XX XX XX

(4) In disposing of an appeal under this section the appellate authority, may after giving the parties an opportunity of making their representations, pass such order thereon as it may deem fit

XX XX XX

**111. Cognizance of offences.-** (1)

XX XX XX

(2) No prosecution shall be instituted under this Act without the previous sanction of,—

(a) The Director of Co-operative Audit in respect of matters arising out of audit;

(b) the Registrar in respect of other matters.

XX XX XX

**128A. Constitution of a common cadre.-** (1) Notwithstanding anything contained in this Act, the rules or the bye-laws, where the Registrar, in the interest of the co-operative movement, considers that the creation of a common cadre of employees for any class of co-operative societies is necessary, he shall authorize one or more federal societies to which such class of co-operative societies is affiliated to exercise the power of appointment, transfer and disciplinary action in respect of such categories of employees of that class of co-operative societies as may be specified by him and make such regulations as may be necessary for carrying out the said purpose. Where such federal society is so authorized by the Registrar, the affiliated co-operative societies shall not have powers to deal with such categories of employees except to the extent the regulations may permit.

(2) The Registrar shall have power to require the affiliated co-operative societies to make contribution of such sum every year towards expenditure, as the federal society is likely to incur or has incurred for the purpose. If any co-operative society fails to pay the said sum to such authority as may be specified by the Registrar and within the time fixed by him, the Registrar may on the application of the authority, and after such enquiry as he may consider necessary, make an order requiring the co-operative society to pay the amount, and every such order shall be enforceable against the co-operative society as if it were an award under section 71.

XX XX XX

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೮, ೨೦೧೦ (ಫಾಲ್ಗುಣ ೧೭, ಶಕ ವರ್ಷ ೧೯೩೧) | ನಂ. ೨೩೩ |
|---|---|---|

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:ವಿಪವಿ:02:2010, ಬೆಂಗಳೂರು, ದಿನಾಂಕ: 8ನೇ ಮಾರ್ಚ್, 2010**

ಈ ಮುಂದಿನ ವಿಧೇಯಕವನ್ನು ವಿಧಾನ ಪರಿಷತ್ತಿನಲ್ಲಿ ದಿನಾಂಕ: 8ನೇ ಮಾರ್ಚ್ 2010, ರಂದು ಮಂಡಿಸಲಾಯಿತು.

**"ಕರ್ನಾಟಕ ಸಹಕಾರ ಸಂಘಗಳ (ಎರಡನೇ ತಿದ್ದುಪಡಿ) ವಿಧೇಯಕ, 2010"**

**ಕರ್ನಾಟಕ ವಿಧಾನ ಪರಿಷತ್ತು**

**ನೂರ ಹನ್ನೆರಡನೆಯ ಅಧಿವೇಶನ**

**ಕರ್ನಾಟಕ ಸಹಕಾರ ಸಂಘಗಳ (ಎರಡನೇ ತಿದ್ದುಪಡಿ) ವಿಧೇಯಕ, 2010**

**(2010ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 2)**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು (1959ರ ಕರ್ನಾಟಕ ಅಧಿನಿಯಮ 11) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲ ದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:–** (1) ಈ ಅಧಿನಿಯಮವನ್ನು **ಕರ್ನಾಟಕ ಸಹಕಾರ ಸಂಘಗಳ (ಎರಡನೇ ತಿದ್ದುಪಡಿ) ಅಧಿನಿಯಮ, 2010** ಎಂದು ಕರೆಯತಕ್ಕದ್ದು.

**(2)** ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 14ಎ ಪ್ರಕರಣದ ಸೇರ್ಪಡೆ:–** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ (1959ರ ಕರ್ನಾಟಕ ಅಧಿನಿಯಮ 11) 14ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"14ಎ. ಸಾರ್ವಜನಿಕ ಹಿತದೃಷ್ಟಿಯಿಂದ ಸಮ್ಮಿಳನ, ವಿಭಜನೆ ಮತ್ತು ಪುನರ್ ರಚನೆಗೆ ನಿರ್ದೇಶಿಸಲು ಅಧಿಕಾರ.–** (1) ಈ ಅಧಿನಿಯಮದಲ್ಲಿ ಅಥವಾ ಅದರ ಮೇರೆಗೆ ರಚಿಸಲಾದ ನಿಯಮದಲ್ಲಿ ಮತ್ತು ಸಂಬಂಧಪಟ್ಟ ಸಹಕಾರ ಸಂಘಗಳ ಉಪವಿಧಿಗಳಲ್ಲಿ ಏನೇ ಒಳಗೊಂಡಿದ್ದರೂ, ಸಾರ್ವಜನಿಕ ಹಿತದೃಷ್ಟಿಯಿಂದ ಅಥವಾ ಸಹಕಾರ ಚಳವಳಿಯ ಹಿತದೃಷ್ಟಿಯಿಂದ ಅಥವಾ ಸಹಕಾರ ಸಂಘಗಳ ಆರ್ಥಿಕ ಸಾಮರ್ಥ್ಯದ ವಿಷಯದಲ್ಲಿ ರಾಜಿ ಮಾಡಿಕೊಳ್ಳದೆ, ಯಾವುವೇ ಸಹಕಾರ ಸಂಘಗಳ ಸೂಕ್ತ ಆಡಳಿತ ನಿರ್ವಹಣೆಯನ್ನು ಖಚಿತಪಡಿಸುವ ಉದ್ದೇಶಕ್ಕಾಗಿ, ಯಾವುವೇ ಎರಡು ಅಥವಾ ಹೆಚ್ಚು ಸಹಕಾರ ಸಂಘಗಳನ್ನು ಒಂದೇ ಸಹಕಾರ ಸಂಘವಾಗಿ ಸಮ್ಮಿಳನಗೊಳಿಸಬೇಕೆಂದು ಅಥವಾ ಯಾವುದೇ ಸಹಕಾರ ಸಂಘವನ್ನು ವಿಭಜಿಸಬೇಕೆಂದು ಅಥವಾ ಯಾವುವೇ ಸಹಕಾರ ಸಂಘವನ್ನು ಪುನರ್‌ರಚಿಸಬೇಕೆಂದು ರಿಜಿಸ್ಟ್ರಾರನಿಗೆ ಮನದಟ್ಟಾದರೆ, ರಿಜಿಸ್ಟ್ರಾರನು ಅಂಥ ಸಹಕಾರ ಸಂಘಗಳ ಸಮ್ಮಿಳನಕ್ಕೆ, ವಿಭಜನೆಗೆ ಅಥವಾ ಪುನರ್‌ರಚನೆಗೆ ಆದೇಶಿಸತಕ್ಕದ್ದು:

ಪರಂತು, ಸಹಕಾರ ಬ್ಯಾಂಕಿನ ಸಂದರ್ಭದಲ್ಲಿ, ರಿಸರ್ವ್ ಬ್ಯಾಂಕಿನ ಲಿಖಿತ ಪೂರ್ವಾನುಮೋದನೆಯನ್ನು ಪಡೆಯದೆ ಈ ಉಪಪ್ರಕರಣದ ಮೇರೆಗೆ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದ ಮೇರೆಗಿನ ಯಾವುದೇ ಆದೇಶವನ್ನು, ರಿಜಿಸ್ಟ್ರಾರನು, ಅಥವಾ ಯಾರೇ ಇತರ ಅಧಿಕಾರಿಯು, ಅಂಥ ಆದೇಶದಿಂದ ಬಾಧಿತವಾಗಬಹುದಾದ ಯಾವುದೇ ಸಹಕಾರ ಸಂಘಕ್ಕೆ ಅಥವಾ ವ್ಯಕ್ತಿಗೆ, ಮನವಿ ಸಲ್ಲಿಸಲು ಅಥವಾ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡದ ಹೊರತು ಮಾಡತಕ್ಕದ್ದಲ್ಲ.

(3) ಆ ಆದೇಶವು,–

(ಎ) ಸಮ್ಮಿಳನಗೊಂಡ, ವಿಭಜನೆಗೊಂಡ ಅಥವಾ ಪುನರ್‌ರಚಿಸಿದ ಸಹಕಾರ ಸಂಘದ ಅಥವಾ ಸಂಘಗಳ ಆಸ್ತಿಗಳ ಮತ್ತು ಹೊಣೆಗಾರಿಕೆಗಳ ಪ್ರಾಪ್ತಿಗಾಗಿ ಮತ್ತು ಆ ಪ್ರಾಪ್ತಿಯು ಯಾವ ದಿನಾಂಕದಂದು ಜಾರಿಗೆ ಬರುವುದೋ ಆ ದಿನಾಂಕದ ಬಗ್ಗೆ ಉಪಬಂಧಿಸತಕ್ಕದ್ದು;

(ಬಿ)(i) ಮೊದಲ ಸಮಿತಿಯ ರಚನೆ, ಸದಸ್ಯರ ಸಂಖ್ಯೆ, ಹೆಸರುಗಳು ಮತ್ತು (ಅಧ್ಯಕ್ಷನನ್ನೂ ಒಳಗೊಂಡಂತೆ) ಸದಸ್ಯರ ಪದಾವಧಿಯನ್ನು ನಿರ್ದಿಷ್ಟಪಡಿಸತಕ್ಕದ್ದು;

(ii) ಹೊಸ ಸಹಕಾರ ಸಂಘದ ಅಥವಾ ಸಂದರ್ಭಾನುಸಾರ ಪ್ರತಿಯೊಂದು ಸಹಕಾರ ಸಂಘಗಳ ವ್ಯವಸ್ಥಾಪಕ ನಿರ್ದೇಶಕನ/ಕಾರ್ಯದರ್ಶಿಯ ಪೈಕಿ ಯಾರು 29 ಜಿ ಪ್ರಕರಣಕ್ಕೆ ಒಳಪಡತಕ್ಕದ್ದು ಎಂಬುದನ್ನು ನಿರ್ದಿಷ್ಟಪಡಿಸತಕ್ಕದ್ದು; ಮತ್ತು

(iii) ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ತಿದ್ದುಪಡಿಯಾಗುವವರೆಗೆ ಹೊಸ ಸಹಕಾರ ಸಂಘವು ಅಥವಾ ಪ್ರತಿಯೊಂದು ಹೊಸ ಸಹಕಾರ ಸಂಘಗಳು, ಯಾವ ಉಪವಿಧಿಗಳನ್ನು ಅನುಸರಿಸಬೇಕೋ ಆ ಉಪವಿಧಿಗಳನ್ನು ನಿರ್ದಿಷ್ಟಪಡಿಸತಕ್ಕದ್ದು:

ಪರಂತು ರಿಜಿಸ್ಟ್ರಾರನು, ಆದೇಶದ ಮೂಲಕ, (i)ನೇ ಉಪ ಖಂಡದ ಮೇರೆಗಿನ ಅವಧಿಯನ್ನು ಮೊಟಕುಗೊಳಿಸಬಹುದು ಮತ್ತು ಹಾಗೆ ಮೊಟಕುಗೊಳಿಸಲಾದ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಸಹಕಾರ ಸಂಘದ ಮಹಾಸಭೆಯನ್ನು ನಡೆಸಲು ಮತ್ತು ಚುನಾವಣೆಗಳನ್ನು ನಡೆಸಲು ಅವಶ್ಯಕ ಕ್ರಮಗಳನ್ನು ಕೈಗೊಳ್ಳಬಹುದು.

(4) (3)ನೇ ಉಪ ಪ್ರಕರಣದ ಮೇರೆಗೆ ಮಾಡಿದ ಪ್ರತಿಯೊಂದು ಆದೇಶವನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು ಮತ್ತು ಆ ಆದೇಶದಲ್ಲಿ ಅನ್ಯಥಾ ನಿರ್ದಿಷ್ಟಪಡಿಸಿದ್ದ ಹೊರತು, ಅದು ಅಂಥ ಪ್ರಕಟಣೆಯ ದಿನಾಂಕದಂದು ಜಾರಿಗೆ ಬರತಕ್ಕದ್ದು.

(5) (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಆದೇಶವು, ಸಮ್ಮಿಳನವನ್ನು ಅಥವಾ ವಿಭಜನೆಯನ್ನು ಅಥವಾ ಪುನರ್ ರಚನೆಯನ್ನು ಜಾರಿಗೊಳಿಸಲು ಅಗತ್ಯವೆಂದು ರಿಜಿಸ್ಟ್ರಾರನು ಅಭಿಪ್ರಾಯಪಡಬಹುದಾದಂಥ ಪ್ರಾಸಂಗಿಕ, ಆನುಷಂಗಿಕ ಮತ್ತು ಪೂರಕ ಉಪಬಂಧಗಳನ್ನು ಒಳಗೊಂಡಿರಬಹುದು.

(6) ಸ್ವತ್ತು ವರ್ಗಾವಣೆ ಅಧಿನಿಯಮ, 1882 (1882ರ ಕೇಂದ್ರ ಅಧಿನಿಯಮ 4)ರಲ್ಲಿ ಅಥವಾ ನೋಂದಣಿ ಅಧಿನಿಯಮ, 1908 (1908ರ ಕೇಂದ್ರ ಅಧಿನಿಯಮ 16)ರಲ್ಲಿ ಏನೇ ಒಳಗೊಂಡಿದ್ದರೂ, ಸಮ್ಮಿಳನದ ಸಂದರ್ಭದಲ್ಲಿ, ಸಮ್ಮಿಳನಗೊಂಡ ಸಹಕಾರ ಸಂಘದ ನೋಂದಣಿಯನ್ನು, ಮತ್ತು ವಿಭಜನೆಯ ಸಂದರ್ಭದಲ್ಲಿ, ಹೊಸ ಸಹಕಾರ ಸಂಘಗಳ ನೋಂದಣಿಯನ್ನು, ಸಮ್ಮಿಳನದ ಅಥವಾ ವಿಭಜನೆಯ ಆದೇಶದಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಆ ಪ್ರತಿಯೊಂದು ಸಂದರ್ಭದಲ್ಲಿ ಸಮ್ಮಿಳನಗೊಳ್ಳುತ್ತಿರುವ ಸಹಕಾರ ಸಂಘಗಳ ಅಥವಾ ಮೂಲ ಸಹಕಾರ ಸಂಘದ ಆಸ್ತಿಗಳು ಮತ್ತು ಹೊಣೆಗಾರಿಕೆಗಳು ಸಮ್ಮಿಳನಗೊಂಡ ಸಹಕಾರ ಸಂಘದಲ್ಲಿ ಅಥವಾ ಸಂದರ್ಭಾನುಸಾರ, ಹೊಸ ಸಹಕಾರ ಸಂಘಗಳಲ್ಲಿ, ನಿಹಿತಗೊಳ್ಳಲು ಸಾಕಷ್ಟು ಹಸ್ತಾಂತರಣವಾಗಿರತಕ್ಕದ್ದು.

(7) ಸಹಕಾರ ಸಂಘದ ಸಮ್ಮಿಳನವು ಅಥವಾ ವಿಭಜನೆಯು ಅಥವಾ ಪುನರ್ ರಚನೆಯು ಹಾಗೆ ಸಮ್ಮಿಳನಗೊಳಿಸಿದ ಸಹಕಾರ ಸಂಘಗಳ ಅಥವಾ ಹಾಗೆ ವಿಭಜನೆಗೊಳಿಸಿದ ಅಥವಾ ಪುನರ್ ರಚಿಸಿದ ಸಹಕಾರ ಸಂಘದ ಯಾವುದೇ ಹಕ್ಕಿಗೆ ಅಥವಾ ಹೊಣೆಗಾರಿಕೆಗೆ ಬಾಧಕವನ್ನುಂಟುಮಾಡತಕ್ಕದ್ದಲ್ಲ, ಅಥವಾ ಹಾಗೆ ಸಮ್ಮಿಳನಗೊಳಿಸಿದ ಅಥವಾ ವಿಭಜನೆಗೊಳಿಸಿದ ಅಥವಾ ಪುನರ್ ರಚಿಸಿದ ಸಹಕಾರ ಸಂಘಗಳು ಅಥವಾ ಅವುಗಳ ವಿರುದ್ಧ, ಮುಂದುವರೆಸಬಹುದಾಗಿದ್ದ ಅಥವಾ ಪ್ರಾರಂಭಿಸಬಹುದಾಗಿದ್ದ ಯಾವುದೇ ಕಾನೂನು ವ್ಯವಹರಣೆಗಳನ್ನು ದೋಷಯುಕ್ತವನ್ನಾಗಿ ಮಾಡತಕ್ಕದ್ದಲ್ಲ ಮತ್ತು ತದನುಸಾರವಾಗಿ ಅಂಥ ಕಾನೂನು ವ್ಯವಹರಣೆಗಳನ್ನು, ಸಂದರ್ಭಾನುಸಾರ, ಸಮ್ಮಿಳನಗೊಳಿಸಿದ ಸಹಕಾರ ಸಂಘವು, ಪುನರ್ ರಚಿಸಿದ ಸಹಕಾರ ಸಂಘವು ಅಥವಾ ಹೊಸ ಸಹಕಾರ ಸಂಘವು ಅಥವಾ ಅದರ ವಿರುದ್ಧ, ಮುಂದುವರೆಸಬಹುದು ಅಥವಾ ಪ್ರಾರಂಭಿಸಬಹುದು."

## ಉದ್ದೇಶ ಮತ್ತು ಕಾರಣಗಳ ಹೇಳಿಕೆ

ಭಾರತ ಸರ್ಕಾರವು, ದೇಶದಲ್ಲಿ, ಅಲ್ಪಾವಧಿ ಸಹಕಾರಿ ಪತ್ತಿನ ವ್ಯವಸ್ಥೆಯ (ರಚನೆಯ) ಪುನಶ್ಚೇತನ ಕ್ರಮಗಳನ್ನು ಸಲಹೆ ಮಾಡುವುದಕ್ಕಾಗಿ ಪ್ರೊ. ಎ. ವೈದ್ಯನಾಥನ್ ರವರ ಅಧ್ಯಕ್ಷತೆಯಲ್ಲಿ 05.08.2004ರಂದು ಕಾರ್ಯಪಡೆಯನ್ನು ನೇಮಿಸಿತ್ತು. ಸದರಿ ಕಾರ್ಯಪಡೆಯು, ರಾಷ್ಟ್ರವ್ಯಂತ ಪ್ರವಾಸ ಕೈಗೊಂಡು, ಸಹಕಾರಿ ಸಂಘಗಳು ಮತ್ತು ಸಹಕಾರಿಗಳೊಡನೆ ಸಂವಾದ ಸಮಾಲೋಚನೆ ನಡೆಸಿ ರಾಷ್ಟ್ರದಲ್ಲಿ ಅಲ್ಪಾವಧಿ ಸಹಕಾರಿ ಪತ್ತಿನ ವ್ಯವಸ್ಥೆಯ ವಿಮರ್ಶಾತ್ಮಕ ಅಧ್ಯಯನ ಮಾಡಿ, 04.02.2005ರಂದು ಭಾರತ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿತು. ತರುವಾಯ ಭಾರತ ಸರ್ಕಾರವು, ರಾಜ್ಯ ಸರ್ಕಾರಗಳ ಪ್ರತಿನಿಧಿಗಳೊಂದಿಗೆ ಚರ್ಚೆ ನಡೆಸಿ ಪ್ರೊ. ಎ. ವೈದ್ಯನಾಥನ್ ಶಿಫಾರಸ್ಸುಗಳ ಆಧಾರದ ಮೇಲೆ ಹಾಗೂ ರಾಜ್ಯ ಸರ್ಕಾರಗಳ ಅಭಿಪ್ರಾಯಗಳನ್ನು ಪರಿಗಣಿಸಿ ಅಲ್ಪಾವಧಿ ಪತ್ತಿನ ಸಹಕಾರಿ ವ್ಯವಸ್ಥೆಗೆ ನವಚೇತನ ತುಂಬುವಂಥ ಪುನಶ್ಚೇತನ ಪ್ಯಾಕೇಜನ್ನು ರೂಪಿಸಿ 2006ರ ಜನವರಿಯಲ್ಲಿ ರಾಜ್ಯಗಳಿಗೆ ಈ ಪ್ಯಾಕೇಜಿನ ಬಗ್ಗೆ ತಿಳಿಸಿತು.

ಕರ್ನಾಟಕ ಸರ್ಕಾರವು, ಪುನಶ್ಚೇತನ ಪ್ಯಾಕೇಜನ್ನು ಒಪ್ಪಿಕೊಂಡು 25.03.2008ರಂದು ಭಾರತ ಸರ್ಕಾರ ಮತ್ತು ನಬಾರ್ಡ್‌ನೊಂದಿಗೆ ತ್ರಿಪಕ್ಷೀಯ ಒಪ್ಪಂದ ಪತ್ರಕ್ಕೆ ಸಹಿ ಹಾಕಿತು. ಸದರಿ ಒಪ್ಪಂದ ಪತ್ರವು, ಸಹಕಾರ ಸಂಘಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ಕ್ಕೆ ಕೆಲವು ತಿದ್ದುಪಡಿಗಳನ್ನು ಮಾಡಿ ಆರ್‌ಬಿಐ/ನಬಾರ್ಡ್‌ಗೆ ಕೆಲವು ಅಧಿಕಾರಗಳನ್ನು ನಿಹಿತಗೊಳಿಸಿರುವುದನ್ನು ಸ್ಪಷ್ಟಪಡಿಸಿತು. ಪ್ಯಾಕೇಜಿನಡಿಯಲ್ಲಿ ನಬಾರ್ಡ್ ಮೂಲಕವಾಗಿ ಭಾರತ ಸರ್ಕಾರವು ಹಣಕಾಸಿನ ನೆರವನ್ನು ಬಿಡುಗಡೆಗೊಳಿಸುವ ಮುಂಚೆ ತದನುಸಾರವಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ಕ್ಕೆ ತಿದ್ದುಪಡಿ ಮಾಡಬೇಕೆಂಬುದು ಒಪ್ಪಂದ ಪತ್ರದಲ್ಲಿಯ ಪೂರ್ವಷರತ್ತಾಗಿದೆ.

ಸಹಕಾರ ಸಂಘಗಳನ್ನು ಕಡ್ಡಾಯವಾಗಿ ಸಮ್ಮಿಳನಗೊಳಿಸಲು ಅಥವಾ ವಿಭಜಿಸಲು ಅಥವಾ ಪುನರ್ ರಚಿಸಲು ಆದೇಶ ಮಾಡುವುದಕ್ಕಾಗಿ ರಿಜಿಸ್ಟ್ರಾರರಿಗೆ ಅಧಿಕಾರ ನೀಡುವ 14ಎ ಪ್ರಕರಣವನ್ನು ಸೇರ್ಪಡೆ ಮಾಡಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ತಿದ್ದುಪಡಿ ಮಾಡುವುದು ಅವಶ್ಯವಾಗಿದೆ ಎಂದು ಪರಿಗಣಿಸಲಾಗಿದೆ. ರಾಜ್ಯದಲ್ಲಿ ಜಿಲ್ಲೆಗಳ ಪುನರ್ ರಚನೆ/ತಾಲ್ಲೂಕುಗಳ ಪ್ರಸ್ತಾಪಿತ ಪುನರ್ ರಚನೆಯ ಹಿನ್ನೆಲೆಯಲ್ಲಿ ಮತ್ತು ಅಲ್ಪಾವಧಿ ಸಹಕಾರ ಪತ್ತಿನ ವ್ಯವಸ್ಥೆಗೆ ಸಂಬಂಧಿಸಿದಂತೆ ಭಾರತ ಸರ್ಕಾರವು ರೂಪಿಸಿದ ಪುನಶ್ಚೇತನ ಪ್ಯಾಕೇಜನ್ನು ಅನುಷ್ಠಾನಗೊಳಿಸುವುದಕ್ಕಾಗಿ ಇದು ಅವಶ್ಯವಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಲಕ್ಷ್ಮಣ್ ಎಸ್. ಸವದಿ**
ಸಹಕಾರ ಸಚಿವರು

**ವಿ. ಶ್ರೀಶ್**
ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತು

**KARNATAKA LEGISLATIVE COUNCIL**

**HUNDRED AND TWELFTH SESSION**

**THE KARNATAKA CO-OPERATIVE SOCIETIES (SECOND AMENDMENT) BILL, 2010**

**(L.C. Bill No. 2 of 2010)**

A Bill further to amend the Karnataka Co-operative Societies Act, 1959.

Whereas it is expedient to amend the Karnataka Co-operative Societies Act, 1959 (Karnataka Act 11 of 1959) for the purposes hereinafter appearing;

Be it enacted by the Karnataka State Legislature in the sixty first year of the republic of India as follows:-

**1. Short title and commencement.**- (1) This Act may be called the Karnataka Co-operative Societies (Second Amendment) Act, 2010.

(2) It shall come into force on such date as the State Government may, by notification, appoint.

**2. Insertion of Section 14A.-** After Section 14 of the Karnataka Co-operative Societies Act, 1959 (Karnataka Act 11 of 1959), the following section shall be inserted, namely:-

**"14-A.- Power to direct amalgamation, division and re-organisation in public interest.-** (1) Notwithstanding anything contained in this Act or the rules made thereunder and the bye-laws of the co-operative societies concerned, where the Registrar, is satisfied that it is essential in public interest or in the interest of co-operative movement or for the purpose of securing the proper management of any co-operative societies without compromising their financial viability that any two or more co-operative societies should be amalgamated to form a single co-operative society or any co-operative society should be divided or any co-operative society should be reorganized, the Registrar shall order the amalgamation, division or reorganization of such co-operative societies:

Provided that in case of a co-operative bank no order under this sub-section shall be made without the previous sanction in writing of the Reserve Bank.

(2) No order under sub-section (1) shall be made by the Registrar or any other officer without giving an opportunity of making representation or of being heard with a notice of not less than thirty days to any co-operative society or person likely to be affected by such order.

(3) The order shall.-

(b) provide for the devolution of the assets and liabilities of the co-operative society or societies amalgamated, divided or reorganized and the date on which the devolution takes effect;

(c) specify –

(i) the composition, strength, names and the term of office of the members (including the Chairman) of the first committee;

(ii) who shall subject to Section 29G be, the Managing Director / Secretary, of the new co-operative society or each of the co-operative societies, as the case may be; and

(iii) the bye-laws which the new co-operative society or each of the new co-operative societies shall, until amended in accordance with the provisions of the Act and the rules, follow:

Provided that the Registrar may by order curtail the term under sub-clause (i) and take necessary steps to hold general meeting of the co-operative society and elections before the expiry of the term so curtailed.

(4) Every order under sub-section(3) shall be published in the Official Gazette and shall, unless otherwise specified in the order, come into force on such publication.

(5) The order referred to in sub-section (1), may contain such incidental, consequential and supplemental provisions as may, in the opinion of the Registrar, be necessary to give effect to the amalgamation or division or reorganization as the case may be.

(6) Notwithstanding anything contained in the Transfer of Property Act, 1882 (Central Act 4 of 1882) or the Registration Act, 1908 (Central Act, 16 of 1908), in the event of amalgamation, the registration of the amalgamated co-operative society and in the event of division, the registration of new co-operative

societies shall with effect from the date specified in the order of amalgamation or division in each case be sufficient conveyance to vest the assets and liabilities of the amalgamating co-operative societies or the original co-operative society in the amalgamated co-operative society or the new co-operative societies, as the case may be.

(7) The amalgamation or division or reorganization of a co-operative society shall not affect any right or obligation of the co-operative societies so amalgamated or the co-operative society so divided or reorganized or render defective any legal proceedings which might have been continued or commenced by or against the co-operative societies which have been so amalgamated or divided or reorganized and accordingly such legal proceedings may be continued or commenced by or against the amalgamated co-operative society, the reorganized co-operative society or the new co-operative societies as the case may be".

**STATEMENT OF OBJECTS AND REASONS**

The Government of India (GOI) had appointed a task force on 05.08.2004 under the Chairmanship of Prof. A.Vaidyanathan to suggest measures for revival of short-term cooperative credit structure in the country. The said task force travelled extensively throughout the country and interacted with cooperative societies and cooperators and made a critical study of the short-term cooperative credit structure in the Country and submitted its report to GOI on 04.02.2005. Thereafter the GOI held discussions with the representatives of the State Governments and formulated a revival package for revitalisation of short-term credit cooperative structure on the basis of the recommendations of Prof.A.Vaidyanathan and taking into account the views of the State Governments and communicated the revival package to the States in January 2006.

The Government of Karnataka has accepted the revival package and signed tripartite Memorandum of Understanding(MoU) with GOI & NABARD on 25.03.2008. The said MoU envisages certain amendments to be brought to the Karnataka Cooperative Societies Act 1959 giving more powers to the cooperative societies and at the same time vesting certain powers with RBI / NABARD. It is a pre-condition under the MoU that the Karnataka Cooperative Societies Act 1959 be amended accordingly before release of the financial assistance by GOI through NABARD under the package.

It is considered necessary to amend the Karnataka Co-operative Societies Act 1959 with the insertion of Section 14A which empowers the Registrar to order for compulsory amalgamation or division or re-organisation of co-operative societies. This has become a necessity in the light of reorganisation of districts / proposed reorganisation of taluks in the State and to implement the revival package of the Government of India for short-term cooperative credit structure.

Hence the Bill.

**FINANCIAL MEMORANDUM**

There is no extra expenditure involved in the proposed measure.

**LAXMAN S. SAVADI**
Minister for Co-operation

**V. SHREESH**
Secretary
Karnataka Legislative Council

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಮಂಗಳವಾರ, ಮಾರ್ಚ್ ೯, ೨೦೧೦ (ಫಾಲ್ಗುಣ ೧೮, ಶಕ ವರ್ಷ ೧೯೩೧) | ನಂ. ೨೩೪ |
|---|---|---|

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 4ರ ಮೇರೆಗೆ ಅಧಿಸೂಚನೆ**

**ಸಂಖ್ಯೆ: ಸಿಐ 553 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ: 8ನೇ ಮಾರ್ಚ್, 2010**

ಬೆಂಗಳೂರು ಜಿಲ್ಲೆ, ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಕರಿಯಮ್ಮನ ಅಗ್ರಹಾರ ಗ್ರಾಮದ ಸರ್ವೆ ನಂ: 33ರ ಪೈಕಿ 0–31 ಗುಂಟೆ ವಿಸ್ತೀರ್ಣದ ಜಮೀನನ್ನು ಕರ್ನಾಟಕ ಸರ್ಕಾರವು ಕೈಗಾರಿಕಾ ಪ್ರದೇಶಾಭಿವೃದ್ಧಿಗಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 3(1) 1(3) ಮತ್ತು 28(1)ರ ಅಧಿಸೂಚನೆ ಸಂಖ್ಯೆ: ಸಿಐ 255

ಎಸ್‌ಪಿಕ್ಯೂ 2001, ದಿನಾಂಕ: 9.2.2004 ಹಾಗೂ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 28(4) ರ ಅಧಿಸೂಚನೆ ಸಂಖ್ಯೆ: ಸಿಐ 126 ಎಸ್‌ಪಿಕ್ಯೂ 2005, ದಿನಾಂಕ: 19.12.2005ರ ಪ್ರಕಾರ ಅನುಮೋದನೆಗೊಂಡು, ದಿನಾಂಕ: 19.12.2005ರ ಕರ್ನಾಟಕ ರಾಜ್ಯಪತ್ರದ ಪುಟ ಸಂಖ್ಯೆ: 1 ರಿಂದ 12ರವರೆಗೆ ಪ್ರಕಟವಾಗಿದೆ.

ಬೆಂಗಳೂರು ಜಿಲ್ಲೆ, ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಕರಿಯಮ್ಮನ ಅಗ್ರಹಾರ ಗ್ರಾಮದ ಸರ್ವೆ ನಂ: 33ರ ಪೈಕಿ 0–31 ಗುಂಟೆ ವಿಸ್ತೀರ್ಣದ ಜಮೀನಿನಲ್ಲಿ ರೇಷ್ಮೆ ಗೂಡು ಮನೆ, ಕೋಳಿ ಫಾರಂ, ಮನೆಗಳು, ರೇರಿಂಗ್ ಹೌಸ್, ಇತರೆ ಕಟ್ಟಡಗಳಿಂದ ಕೂಡಿದ್ದು, ಅಭಿವೃದ್ಧಿಗೊಂಡಿರುತ್ತದೆ. ಆದ್ದರಿಂದ ಈ ವಿಸ್ತೀರ್ಣದ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇಲ್ಲದ ಕಾರಣ, ಸದರಿ ಜಮೀನನ್ನು ಸ್ವಾಧೀನ ಕ್ರಮದಿಂದ ಕೈಬಿಡಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 4ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕಲಂ 3(1) 1(3) ಮತ್ತು 28(1)ರ ಪ್ರಾಥಮಿಕ ಅಧಿಸೂಚನೆ ಮತ್ತು ಕಲಂ 28(4)ರ ಅಂತಿಮ ಅಧಿಸೂಚನೆಯಿಂದ ಸದರಿ ಜಮೀನನ್ನು ಭೂಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ವಿಶೇಷ ಪತ್ರಿಕೆ



| ಭಾಗ – IV-A | ಬೆಂಗಳೂರು, ಮಂಗಳವಾರ, ಮಾರ್ಚ್ ೯, ೨೦೧೦ (ಫಾಲ್ಗುಣ ೧೮, ಶಕ ವರ್ಷ ೧೯೩೧) | ನಂ. ೨೩೫ |
|---|---|---|



**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/40/Bill/2010, Bangalore, Dated : 9th March, 2010**

The following Bill was introduced in Legislative Assembly on 9th March, 2010.

## THE KARNATAKA PREVENTION OF SLAUGHTER AND PRESERVATION OF CATTLE BILL, 2010

**(L.A. Bill No. 04 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಐದನೇ ಅಧಿವೇಶನ**

## ಕರ್ನಾಟಕ ಜಾನುವಾರು ಹತ್ಯೆ ಪ್ರತಿಬಂಧಕ ಮತ್ತು ಸಂರಕ್ಷಣಾ ವಿಧೇಯಕ, 2010
**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 04)**

ಕರ್ನಾಟಕ ರಾಜ್ಯದಲ್ಲಿ ಜಾನುವಾರುಗಳ ಹತ್ಯೆಯನ್ನು ಪ್ರತಿಬಂಧಿಸಲು ಮತ್ತು ಅವುಗಳನ್ನು ಸಂರಕ್ಷಿಸಲು ಒಂದು ಸಮಗ್ರ ಶಾಸನಕ್ಕಾಗಿ ಉಪಬಂಧ ಕಲ್ಪಿಸುವ ಒಂದು ವಿಧೇಯಕ.

ಕರ್ನಾಟಕ ರಾಜ್ಯದಲ್ಲಿ ಜಾನುವಾರುಗಳ ಹತ್ಯೆಯನ್ನು ಪ್ರತಿಬಂಧಿಸಲು ಮತ್ತು ಅವುಗಳನ್ನು ಸಂರಕ್ಷಿಸಲು ಒಂದು ಸಮಗ್ರ ಶಾಸನಕ್ಕಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಜಾನುವಾರು ಹತ್ಯೆ ಪ್ರತಿಬಂಧಕ ಮತ್ತು ಸಂರಕ್ಷಣಾ ಅಧಿನಿಯಮ, 2010 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–**ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(1) "ಗೋಮಾಂಸ" ಎಂದರೆ, ಜಾನುವಾರಿನ ಯಾವುದೇ ಬಗೆಯ ಮಾಂಸ;

(2) "ಜಾನುವಾರು" ಎಂದರೆ, ಹಸು ಹಾಗೂ ಹಸುವಿನ ಕರು, ಹೋರಿ, ಎತ್ತು, ಎಮ್ಮೆ ಅಥವಾ ಕೋಣ ಹಾಗೂ ಎಮ್ಮೆಯ ಕರು;

(3) "ಸಕ್ಷಮ ಪ್ರಾಧಿಕಾರಿ" ಎಂದರೆ 3ನೇ ಪ್ರಕರಣದ ಅಡಿಯಲ್ಲಿ ನೇಮಕಗೊಂಡ ಸಕ್ಷಮ ಪ್ರಾಧಿಕಾರಿ;

(4) "ಅಧಿಸೂಚನೆ" ಎಂದರೆ, ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಒಂದು ಅಧಿಸೂಚನೆ;

(5) "ಆವರಣ" ಎಂದರೆ, ಮತ್ತು ಇದು, ಯಾವುವೇ ಆವರಣಗಳು, ನೌಕೆ ಅಥವಾ ವಾಹನವನ್ನು ಒಳಗೊಳ್ಳುತ್ತದೆ.

(6) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ನಿಯಮಗಳ ಮೂಲಕ ನಿಯಮಿಸಲಾದುದು;

**3. ಸಕ್ಷಮ ಅಧಿಕಾರಿಯ ನೇಮಕ.–** ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ರೆವಿನ್ಯೂ ತಾಲ್ಲೂಕಿನ ತಹಸೀಲ್ದಾರರನ್ನು ಅಥವಾ ಸಹಾಯಕ ನಿರ್ದೇಶಕರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ, ಪಶುಸಂಗೋಪನಾ ಇಲಾಖೆಯ ಒಬ್ಬ ಅಧಿಕಾರಿಯನ್ನು, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸ್ಥಳೀಯ ಪ್ರದೇಶಕ್ಕಾಗಿ, ಈ ಅಧಿನಿಯಮದ ಅಡಿಯಲ್ಲಿ ಸಕ್ಷಮ ಪ್ರಾಧಿಕಾರಿಯ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ನೇಮಕ ಮಾಡಬಹುದು.

**4. ಜಾನುವಾರು ಹತ್ಯೆಯ ನಿಷೇಧ.–** ಇದಕ್ಕೆ ವಿರುದ್ಧವಾಗಿ ಯಾವುದೇ ಕಾನೂನಿನಲ್ಲಿ ರೂಢಿಯಲ್ಲಿ ಅಥವಾ ಆಚರಣೆಯಲ್ಲಿ ಏನೇ ಇದ್ದರೂ, ಯಾವೊಬ್ಬ ವ್ಯಕ್ತಿಯು, ಯಾವುದೇ ಜಾನುವಾರನ್ನು ಹತ್ಯೆ ಮಾಡತಕ್ಕದ್ದಲ್ಲ ಅಥವಾ ಹತ್ಯೆ ಮಾಡುವಂತೆ ಮಾಡತಕ್ಕದ್ದಲ್ಲ ಅಥವಾ ಹತ್ಯೆ ಮಾಡುವುದಕ್ಕಾಗಿ ನೀಡತಕ್ಕದ್ದಲ್ಲ ಅಥವಾ ಹತ್ಯೆ ಮಾಡುವುದಕ್ಕಾಗಿ ನೀಡುವಂತೆ ಮಾಡತಕ್ಕದ್ದಲ್ಲ ಅಥವಾ ಅನ್ಯಥಾ ಉದ್ದೇಶಪೂರ್ವಕವಾಗಿ ಕೊಲ್ಲತಕ್ಕದ್ದಲ್ಲ ಅಥವಾ ಕೊಲ್ಲುವುದಕ್ಕಾಗಿ ನೀಡತಕ್ಕದ್ದಲ್ಲ ಅಥವಾ ನೀಡುವಂತೆ ಮಾಡತಕ್ಕದ್ದಲ್ಲ.

**5. ಗೋಮಾಂಸ ಮಾರಾಟ, ಬಳಕೆ ಮತ್ತು ಸ್ವಾಧೀನತೆಯ ನಿಷೇಧ.–** ಇದಕ್ಕೆ ವಿರುದ್ಧವಾಗಿ ಯಾವುದೇ ಕಾನೂನಿನಲ್ಲಿ, ಇದಕ್ಕೆ ವಿರುದ್ಧವಾದುದು ಏನೇ ಇದ್ದರೂ ಯಾವೊಬ್ಬ ವ್ಯಕ್ತಿಯು, ಗೋಮಾಂಸ ಅಥವಾ ಗೋಮಾಂಸದ ಉತ್ಪನ್ನಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳತಕ್ಕದ್ದಲ್ಲ, ಮಾರಾಟ ಮಾಡತಕ್ಕದ್ದಲ್ಲ ಅಥವಾ ಸಾಗಾಣಿಕೆ ಮಾಡತಕ್ಕದ್ದಲ್ಲ ಅಥವಾ ಸಾಗಾಣಿಕೆ ಮಾಡುವಂತೆ ಮಾಡತಕ್ಕದ್ದಲ್ಲ.

**6. ಜಾನುವಾರು ಸಾಗಣೆ ಮೇಲೆ ನಿರ್ಬಂಧ.–** ಯಾವೊಬ್ಬ ವ್ಯಕ್ತಿಯು, ಹತ್ಯೆ ಮಾಡುವುದಕ್ಕಾಗಿ ರಾಜ್ಯದೊಳಗಿನ ಯಾವುದೇ ಸ್ಥಳದಿಂದ ರಾಜ್ಯದೊಳಗಿನ ಇನ್ನಾವುದೇ ಸ್ಥಳಕ್ಕೆ ಯಾವುದೇ ಜಾನುವಾರನ್ನು ಯಾವುದೇ ರೀತಿಯಲ್ಲಿ ಸಾಗಣೆ ಮಾಡತಕ್ಕದ್ದಲ್ಲ ಅಥವಾ ಸಾಗಣೆ ಮಾಡುವುದಕ್ಕಾಗಿ ನೀಡತಕ್ಕದ್ದಲ್ಲ ಅಥವಾ ಸಾಗಣೆ ಮಾಡುವಂತೆ ಮಾಡತಕ್ಕದ್ದಲ್ಲ:

ಪರಂತು, ಕೃಷಿ ಅಥವಾ ಪಶುಸಂಗೋಪನೆಗಾಗಿ, ರಾಜ್ಯ ಸರ್ಕಾರವು ಅಥವಾ ಕೇಂದ್ರ ಸರ್ಕಾರವು ನಿಯಮಿಸಬಹುದಾದ ರೀತಿಯಲ್ಲಿ, ಸದುದ್ದೇಶದಿಂದ ಯಾವುದೇ ಜಾನುವಾರು ಸಾಗಾಣೆ ಮಾಡುವುದು ಈ ಪ್ರಕರಣದ ಅಡಿಯಲ್ಲಿ ಅಪರಾಧವಾಗುವುದೆಂದು ಅರ್ಥೈಸತಕ್ಕದ್ದಲ್ಲ.

**7. ರಾಜ್ಯದ ಹೊರಗಡೆ ಜಾನುವಾರುಗಳ ಸಾಗಣೆ ನಿಷೇಧ.–** (1) ಯಾವೊಬ್ಬ ವ್ಯಕ್ತಿಯು, ಹತ್ಯೆಯ ಉದ್ದೇಶಕ್ಕಾಗಿ ರಾಜ್ಯದೊಳಗಿನ ಯಾವುದೇ ಸ್ಥಳದಿಂದ ರಾಜ್ಯದ ಹೊರಗೆ ಜಾನುವಾರನ್ನು ಯಾವುದೇ ರೀತಿಯಲ್ಲಿ ಸಾಗಣೆ ಮಾಡತಕ್ಕದ್ದಲ್ಲ ಅಥವಾ ಸಾಗಣೆಗೆ ನೀಡತಕ್ಕದ್ದಲ್ಲ ಅಥವಾ ಸಾಗಣೆ ಮಾಡುವಂತೆ ಮಾಡತಕ್ಕದ್ದಲ್ಲ.

ಪರಂತು, ತಾಲ್ಲೂಕು ಮ್ಯಾಜಿಸ್ಟ್ರೇಟರು, ಕೃಷಿ ಅಥವಾ ಪಶುಸಂಗೋಪನೆಯ ನಿಜವಾದ ಉದ್ದೇಶಗಳಿಗಾಗಿ, ಜಾನುವಾರುಗಳ ಸಾಗಣೆಗಾಗಿ ಪರ್ಮಿಟನ್ನು ನೀಡಬಹುದು.

ಮತ್ತು ಪರಂತು, ಅಂಥ ಜಾನುವಾರು ಸಾಗಣೆಯು, ಪ್ರಾಣಿ ಹಿಂಸಾ ಪ್ರತಿಬಂಧಕ ಅಧಿನಿಯಮ, 1960ರ (1960ರ ಕೇಂದ್ರ ಅಧಿನಿಯಮ 59) ಅಡಿಯಲ್ಲಿ ಜಾನುವಾರು ಸಾಗಣೆಯನ್ನು ನಿಯಂತ್ರಿಸುವ ನಿಯಮಗಳ ಮೂಲಕ ಕೇಂದ್ರ ಸರ್ಕಾರವು ನಿಯಮಿಸಿದ ರೀತಿಯಲ್ಲಿ ಇರತಕ್ಕದ್ದು.

(2) (1)ನೇ ಉಪ ಪ್ರಕರಣದಡಿಯಲ್ಲಿ ನೀಡಿದ ಪರ್ಮಿಟ್ಟು, ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಅಂಥ ವಿಧಾನದಲ್ಲಿ ಮತ್ತು ಅಂಥ ಶುಲ್ಕವನ್ನು ಸಂದಾಯ ಮಾಡುವುದಕ್ಕೊಳಪಟ್ಟಿರತಕ್ಕದ್ದು.

**8. ಹತ್ಯೆಗಾಗಿ ಜಾನುವಾರುಗಳ ಮಾರಾಟ, ಖರೀದಿ ಅಥವಾ ವಿಲೆ ನಿಷೇಧ.–** ಜಾನುವಾರನ್ನು ಹತ್ಯೆ ಮಾಡುವುದಕ್ಕಾಗಿ ಅಥವಾ ಹತ್ಯೆ ಮಾಡಲಾಗುತ್ತದೆ ಎಂದು ತಿಳಿದಿರುವ ಅಥವಾ ನಂಬಲು ಕಾರಣವಿರುವ, ಯಾವೊಬ್ಬ ವ್ಯಕ್ತಿಯು, ಜಾನುವಾರನ್ನು ಖರೀದಿಸತಕ್ಕದ್ದಲ್ಲ, ಮಾರಾಟ ಮಾಡತಕ್ಕದ್ದಲ್ಲ ಅಥವಾ ಅನ್ಯಥಾ ವಿಲೆ ಮಾಡತಕ್ಕದ್ದಲ್ಲ ಅಥವಾ ಖರೀದಿಸಲು, ಮಾರಾಟ ಮಾಡಲು ಅಥವಾ ಅನ್ಯಥಾ ವಿಲೆ ಮಾಡಲು ನೀಡತಕ್ಕದ್ದಲ್ಲ.

**9. ಶೋಧನೆ ಮತ್ತು ಜಪ್ತಿಗೆ ಅಧಿಕಾರ.–** (1) ಸಬ್‌ಇನ್ಸ್‌ಪೆಕ್ಟರ್ ದರ್ಜೆಗಿಂತ ಕಡಿಮೆಯಲ್ಲದ ಪೋಲೀಸ್ ಅಧಿಕಾರಿ ಅಥವಾ ಸಕ್ಷಮ ಪ್ರಾಧಿಕಾರಿಯು, ಈ ಅಧಿನಿಯಮದಡಿಯಲ್ಲಿ ಅಪರಾಧವು ನಡೆದಿದೆ ಎಂದು ನಂಬಲು ಕಾರಣಗಳು ಇದ್ದಲ್ಲಿ, ಅಂಥ ಅಪರಾಧ ಘಟಿಸುವುದಕ್ಕೆ ಬಳಸಿದ, ಬಳಸಲು ಉದ್ದೇಶಿಸಿದ ಅಂಥ ಜಾನುವಾರನ್ನು ಮತ್ತು ಆವರಣಗಳನ್ನು ಹಾಗೂ ಅದಕ್ಕಾಗಿ ಉಪಯೋಗಿಸಿದ ವಸ್ತುಗಳನ್ನು ತಪಾಸಣೆ ಮಾಡಲು ಮತ್ತು ಜಪ್ತಿ ಮಾಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(2) ಅಂಥ ಆವರಣಗಳ ಅಧಿಬೋಗದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯು ಮೇಲೆ ಹೇಳಿದ ಉದ್ದೇಶಕ್ಕಾಗಿ ಅವಶ್ಯಕಬಹುದಾದಂತೆ, ಆವರಣಕ್ಕೆ ಪ್ರವೇಶಿಸಲು ಸಕ್ಷಮ ಪ್ರಾಧಿಕಾರಿಗೆ ಅಥವಾ ಸಬ್ ಇನ್ಸ್‌ಪೆಕ್ಟರ್ ದರ್ಜೆಗಿಂತ ಕಡಿಮೆಯಲ್ಲದ ಒಬ್ಬ ಅಧಿಕಾರಿಗೆ ಅಂಥ ಅವಕಾಶವನ್ನು ಕೊಡತಕ್ಕದ್ದು ಮತ್ತು ಸಬ್‌ಇನ್ಸ್‌ಪೆಕ್ಟರ್ ದರ್ಜೆಗಿಂತ ಕಡಿಮೆಯಲ್ಲದ ಪೋಲೀಸ್ ಅಧಿಕಾರಿಯು ಅಥವಾ ಸಕ್ಷಮ ಪ್ರಾಧಿಕಾರಿಯು ಕೇಳಿದ ಯಾವುವೇ ಪ್ರಶ್ನೆಗಳಿಗೆ ಅವನು ತನಗೆ ತಿಳಿದ ಮಟ್ಟಿಗೆ ಮತ್ತು ನಂಬಿರುವಷ್ಟರ ಮಟ್ಟಿಗೆ ಉತ್ತರ ನೀಡತಕ್ಕದ್ದು.

(3) (1)ನೇ ಉಪ ಪ್ರಕರಣದಡಿಯಲ್ಲಿ ಜಪ್ತಿ ಮಾಡಿದ ತರುವಾಯ, ಆತನು ಅದನ್ನು ಅನುಚಿತ ವಿಳಂಬವಿಲ್ಲದೆ ಮುಟ್ಟುಗೋಲು ಹಾಕುವುದಕ್ಕಾಗಿ ಉಪವಿಭಾಗದ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸತಕ್ಕದ್ದು.

(4) ವರದಿಯನ್ನು, ಅಪರಾಧ ಘಟಿಸುವಲ್ಲಿ ಬಳಸಿದ ಅಥವಾ ಬಳಸಲು ಉದ್ದೇಶಿಸಿದ ಆವರಣಗಳಿಗೆ ಮತ್ತು ವಸ್ತುಗಳಿಗೆ ಸಂಬಂಧಪಡುವ ದಾಖಲೆಗಳನ್ನು ಸ್ವೀಕರಿಸಿದ ಮೇಲೆ, ಈ ಅಧಿನಿಯಮದ ಅಡಿಯಲ್ಲಿ ಅಪರಾಧ ಘಟಿಸಿದೆ ಎಂದು ಅಥವಾ ಅಪರಾಧ ಎಸಗಲು ಉದ್ದೇಶಿಸಲಾಗಿತ್ತೆಂದು ಉಪವಿಭಾಗ ಮ್ಯಾಜಿಸ್ಟ್ರೇಟರಿಗೆ ಮನವರಿಕೆಯಾದರೆ, ಆಪಾದಿಸಲಾದ ಅಪರಾಧದ ಸಂಬಂಧದಲ್ಲಿ ಪ್ರಾರಂಭಿಸಲಾದ ಕ್ರಿಮಿನಲ್ ವ್ಯವಹರಣೆಗಳು ಇತ್ಯರ್ಥದಲ್ಲಿರುವಾಗ ಆತನು ಅಂದಾಜು ಮಾಡಿದ ಮೌಲ್ಯಕ್ಕೆ ಸಮನಾದ ಬ್ಯಾಂಕ್ ಖಾತರಿಯನ್ನು ಒದಗಿಸಿದ ಮೇಲೆ, ವಾಹನವೂ ಒಳಗೊಂಡಂತೆ, ಜಾನುವಾರನ್ನು ಹೊರತುಪಡಿಸಿ, ವಸ್ತುಗಳನ್ನು ಬಿಡುಗಡೆ ಮಾಡಬಹುದು ಮತ್ತು ಜಪ್ತಿ ಮಾಡಿದ್ದುದರ ಸಂಬಂಧದಲ್ಲಿ ಅಪರಾಧದ ವಿಚಾರಣೆ ಮಾಡಲು ಅಧಿಕಾರ ವ್ಯಾಪ್ತಿ ಹೊಂದಿದ ಮ್ಯಾಜಿಸ್ಟ್ರೇಟರ ಮುಂದೆ, ಹಾಗೆ ಬಿಡುಗಡೆ ಮಾಡಿದ ಸ್ವತ್ತನ್ನು ಅಗತ್ಯಪಡಿಸಿದಾಗಲ್ಲೆಲ್ಲಾ ಹಾಜರುಪಡಿಸುವ ಬಗ್ಗೆ ಒಂದು ಬಂಧಪತ್ರದೊಡನೆ ಬ್ಯಾಂಕ್ ಖಾತರಿಯನ್ನು ಅದರ ಮಾಲೀಕನು ಬರೆದುಕೊಟ್ಟ ಮೇಲೆ, ಜಾನುವಾರುಗಳನ್ನು 18ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿಸಲಾದ ಸಂಸ್ಥೆಗೆ ಒಪ್ಪಿಸುವುದಕ್ಕಾಗಿ ಆದೇಶಿಸಬಹುದು.

(5) ಅಪರಾಧ ಘಟಿಸುವಲ್ಲಿ ಬಳಸಿದ ಅಥವಾ ಬಳಸಲು ಉದ್ದೇಶಿಸಿದ ಆವರಣಗಳಿಗೆ ಮತ್ತು ವಸ್ತುಗಳಿಗೆ ಸಂಬಂಧಿಸಿದ ದಾಖಲೆಗಳ ಸಂಬಂಧದಲ್ಲಿ ಹಾಗೆ ವಶಪಡಿಸಿಕೊಂಡ ಬಗ್ಗೆ ವರದಿಯನ್ನು ಸ್ವೀಕರಿಸಿದ ಮೇಲೆ, ಈ ಅಧಿನಿಯಮದ ಅಡಿಯಲ್ಲಿ ಅಪರಾಧ ಘಟಿಸಿದೆ ಎಂದು ಅಥವಾ ಅಪರಾಧ ಎಸಗಲು ಉದ್ದೇಶಿಸಲಾಗಿತ್ತೆಂದು ಉಪವಿಭಾಗ ಮ್ಯಾಜಿಸ್ಟ್ರೇಟರಿಗೆ ಮನವರಿಕೆಯಾದ ಮೇಲೆ ಅಂಥ ಅಪರಾಧಕ್ಕಾಗಿ ಅಭಿಯೋಜನೆ ಹೂಡಿರಲಿ ಅಥವಾ ಇಲ್ಲದಿರಲಿ, ಅದನ್ನು ಮುಟ್ಟುಗೋಲು ಹಾಕಿಕೊಳ್ಳುವ ಅಂಥ ಆದೇಶ ಮಾಡಬಹುದು:

ಪರಂತು, ಅಪರಾಧವನ್ನು ಎಸಗಿದ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಡದೇ ಯಾವುದೇ ಅಂಥ ಆದೇಶವನ್ನು ಮಾಡತಕ್ಕದ್ದಲ್ಲ.

(6) (5)ನೇ ಉಪಪ್ರಕರಣದ ಅಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳುವುದಕ್ಕಾಗಿ ಆದೇಶವನ್ನು ಮಾಡುವಾಗ ಉಪವಿಭಾಗ ಮ್ಯಾಜಿಸ್ಟ್ರೇಟರು, ಮುಟ್ಟುಗೋಲು ಹಾಕಿಕೊಳ್ಳುವ ಆದೇಶವು ಸಂಬಂಧಪಡುವ ಅಂಥ ಸ್ವತ್ತುಗಳನ್ನು ಸಂರಕ್ಷಿಸಿಡಲು ಸಾಧ್ಯವಿಲ್ಲವೆಂದು ಅಥವಾ ಮಾನವರ ಬಳಕೆಗೆ ಸೂಕ್ತವಾಗಿಲ್ಲವೆಂದು ಅವರು ಅಭಿಪ್ರಾಯಪಟ್ಟರೆ, ಅವುಗಳನ್ನು ನಾಶಪಡಿಸಲು ಸಹ ಆದೇಶಿಸಬಹುದು.

(7) ಉಪವಿಭಾಗ ಮ್ಯಾಜಿಸ್ಟ್ರೇಟರು, ಮುಟ್ಟುಗೋಲು ಹಾಕಿಕೊಂಡ ಆವರಣವನ್ನು ಸಾರ್ವಜನಿಕ ಹರಾಜಿನಲ್ಲಿ ಮಾರಾಟ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟರೆ, ಅವರು ಹಾಗೆ ಮಾಡಬಹುದು.

(8) ಮೇಲೆ ಹೇಳಿದಂತೆ, ಮುಟ್ಟುಗೋಲು ಹಾಕಿಕೊಂಡ ಸ್ವತ್ತನ್ನು ಮಾರಾಟ ಮಾಡಿದಾಗ ಅದರ ಉತ್ಪತ್ತಿಯನ್ನು, ಅದಕ್ಕೆ ಸಂಬಂಧಪಟ್ಟ ಯಾವುದೇ ಅಂಥ ಹರಾಜಿನ ವೆಚ್ಚಗಳನ್ನು ಅಥವಾ ಇತರ ಪ್ರಾಸಂಗಿಕ ವೆಚ್ಚಗಳನ್ನು ವಜಾ ಮಾಡಿಕೊಂಡ ತರುವಾಯ, (5)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ್ದ ಮುಟ್ಟುಗೋಲು ಹಾಕಿಕೊಳ್ಳುವ ಆದೇಶವನ್ನು ಅಪೀಲು ನ್ಯಾಯಾಲಯವು ತಳ್ಳಿ ಹಾಕಿದ್ದಲ್ಲಿ ಅಥವಾ ರದ್ದುಗೊಳಿಸಿದ್ದಲ್ಲಿ, ಅದರ ಮಾಲೀಕನಿಗೆ ಅಥವಾ ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅದನ್ನು ಯಾರಿಂದ ವಶಕ್ಕೆ ತೆಗೆದುಕೊಳ್ಳಲಾಗಿದೆಯೋ ಆ ವ್ಯಕ್ತಿಗೆ ಸಂದಾಯ ಮಾಡತಕ್ಕದ್ದು.

(9) (5)ನೇ ಉಪ ಪ್ರಕರಣದ ಅಡಿಯಲ್ಲಿ ಹೊರಡಿಸಿದ್ದ ಮುಟ್ಟುಗೋಲು ಹಾಕಿಕೊಳ್ಳುವ ಅಂಥ ಆದೇಶವು ಅಂತಿಮವಾದಾಗ ಹಾಗೂ ಅಂಥ ಸ್ವತ್ತನ್ನು ಪೂರ್ಣವಾಗಿ ಅಥವಾ ಅದರ ಯಾವುದೇ ಭಾಗದ ಸಂಬಂಧದಲ್ಲಿ ಅಂಥ ಆದೇಶವನ್ನು ಅಪೀಲು ನ್ಯಾಯಾಲಯವು ದೃಢೀಕರಿಸಿದ್ದರೆ, ಅಂಥ ಸ್ವತ್ತು ಅಥವಾ ಸಂದರ್ಭಾನುಸಾರ ಅದರ ಭಾಗವು ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು.

(10) ಮುಟ್ಟುಗೋಲು ಹಾಕಿಕೊಂಡ ಜಾನುವಾರುಗಳನ್ನು 18ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿಸಲಾದ ಸಂಸ್ಥೆಗೆ ಒಪ್ಪಿಸತಕ್ಕದ್ದು ಮತ್ತು ಯಾವುವೇ ಸಂದರ್ಭಗಳಲ್ಲಿ ಆಪಾದಿತನಿಗೆ ಒಪ್ಪಿಸತಕ್ಕದ್ದಲ್ಲ ಅಥವಾ ಸಾರ್ವಜನಿಕ ಹರಾಜಿನಲ್ಲಿ ಮಾರಾಟಮಾಡತಕ್ಕದ್ದಲ್ಲ.

**10. ಅಪೀಲುಗಳು.–** (1) 9ನೇ ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಯಾವುದೇ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅಂಥ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ವಶಪಡಿಸಿಕೊಳ್ಳಲಾದ ಸ್ವತ್ತು ಸಂಬಂಧಪಡುವ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯುಳ್ಳ ಸೆಷನ್ ನ್ಯಾಯಾಧೀಶರಿಗೆ, ಅಪೀಲನ್ನು ಸಲ್ಲಿಸಬಹುದು.

(2) ಸೆಷನ್ ನ್ಯಾಯಾಧೀಶರು, ಬಾಧಿತ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ತರುವಾಯ, ತಾನು ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಹೊರಡಿಸಬಹುದು.

**11. ಕೆಲವು ಪ್ರಕರಣಗಳಲ್ಲಿ ಅಧಿಕಾರ ವ್ಯಾಪ್ತಿಯ ಪ್ರತಿಷೇಧ.–** ಅಂಥ ಅಪರಾಧವನ್ನು ಮಾಡುವುದಕ್ಕಾಗಿ ಯಾವುದೇ ಜಾನುವಾರು ಮತ್ತು ಆವರಣಗಳು ಮತ್ತು ವಸ್ತುಗಳನ್ನು ಬಳಸಿದಾಗ ಅಥವಾ ಬಳಸಲು ಉದ್ದೇಶಿಸಿದಾಗ ಮತ್ತು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ತಡೆಹಿಡಿದಿಟ್ಟಾಗ 10ನೇ ಪ್ರಕರಣದ ಅಡಿಯಲ್ಲಿ ಅಪೀಲಿನ ವಿಚಾರಣೆ ನಡೆಸುತ್ತಿರುವ ಉಪವಿಭಾಗ ಮ್ಯಾಜಿಸ್ಟ್ರೇಟರು ಅಥವಾ ಸೆಷನ್ ನ್ಯಾಯಾಧೀಶರು, ಅಂಥ ಸ್ವತ್ತಿನ ಅಭಿರಕ್ಷೆ, ಸ್ವಾಧೀನತೆ, ವಶಾವಣೆ, ವಿಲೆ ಅಥವಾ ನಾಶಪಡಿಸುವುದಕ್ಕೆ ಸಂಬಂಧಪಟ್ಟಂತೆ ಆದೇಶಗಳನ್ನು ಮಾಡಲು ಅಧಿಕಾರ ವ್ಯಾಪ್ತಿಯನ್ನು ಹೊಂದಿರತಕ್ಕದ್ದು. ಮತ್ತು ಯಾವೊಬ್ಬ ಇತರ ಅಧಿಕಾರಿಯಾಗಲೀ ಅಥವಾ ನ್ಯಾಯಾಲಯವಾಗಲೀ, ನ್ಯಾಯಧಿಕರಣ ಅಥವಾ ಪ್ರಾಧಿಕಾರವು ಅಧಿಕಾರ ವ್ಯಾಪ್ತಿಯನ್ನು ಹೊಂದಿರತಕ್ಕದ್ದಲ್ಲ.

**12. ದಂಡಗಳು.–** (1) ಈ ಅಧಿನಿಯಮದ 4ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾವೊಬ್ಬನು, ಅಪರಾಧ ನಿರ್ಣಯವಾದ ಮೇಲೆ, ಒಂದು ವರ್ಷಕ್ಕೆ ಕಡಿಮೆಯಿಲ್ಲದೆ ಆದರೆ ಏಳುವರ್ಷಗಳಿಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಇಪ್ಪತ್ತೈದು ಸಾವಿರ ರೂಪಾಯಿಗಳಿಗೆ ಕಡಿಮೆಯಿಲ್ಲದೆ ಆದರೆ ಐವತ್ತು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು. ಎರಡನೆಯ ಅಥವಾ ಅಪರಾಧದ ಮುಂದುವರೆದ ಸಂದರ್ಭದಲ್ಲಿ, ಕಾರಾವಾಸದ ಶಿಕ್ಷೆಯೊಂದಿಗೆ, ಐವತ್ತು ಸಾವಿರ ರೂಪಾಯಿಗಳಿಗೆ ಕಡಿಮೆಯಿಲ್ಲದ ಆದರೆ ಒಂದು ಲಕ್ಷ ರೂಪಾಯಿಗಳಿಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯೊಂದಿಗೆ ದಂಡಿತನಾಗತಕ್ಕದ್ದು.

(2) ಈ ಅಧಿನಿಯಮದ 4ನೇ ಪ್ರಕರಣವನ್ನು ಹೊರತುಪಡಿಸಿ ಇತರ ಯಾವುವೇ ಉಪಬಂಧಗಳನ್ನು ಉಲ್ಲಂಘಿಸುವ ಯಾವೊಬ್ಬನು, ಅಪರಾಧ ನಿರ್ಣಯವಾದ ಮೇಲೆ ಒಂದು ವರ್ಷಕ್ಕೆ ಕಡಿಮೆಯಲ್ಲದೆ ಆದರೆ ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಹತ್ತು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಇಪ್ಪತ್ತೈದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು.

**13. ಅಧಿನಿಯಮದಡಿಯಲ್ಲಿಯ ಅಪರಾಧಗಳು ಸಂಜ್ಞೇಯವಾಗಿರತಕ್ಕದ್ದು.–** ಈ ಅಧಿನಿಯಮದಡಿಯಲ್ಲಿನ ಎಲ್ಲಾ ಅಪರಾಧಗಳು, ಸಂಜ್ಞೇಯವಾಗಿರತಕ್ಕದ್ದು ಮತ್ತು ಜಾಮೀನೀಯವಾಗಿರತಕ್ಕದ್ದಲ್ಲ ಮತ್ತು ಪ್ರಥಮ ದರ್ಜೆ ನ್ಯಾಯಿಕ ಮ್ಯಾಜಿಸ್ಟ್ರೇಟರು ನ್ಯಾಯಾಲಯದಿಂದ ಅಧಿವಿಚಾರಣೆಗೊಳಪಡತಕ್ಕದ್ದು.

**14. ದುಷ್ಪ್ರೇರಣೆ.–** ಯಾವೊಬ್ಬನು, ಈ ಅಧಿನಿಯಮದಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧವನ್ನು ದುಷ್ಪ್ರೇರಿಸದಲ್ಲಿ ಅಥವಾ ಯಾವುದೇ ಅಂಥ ಅಪರಾಧವನ್ನು ಮಾಡಲು ಪ್ರಯತ್ನಿಸಿದಲ್ಲಿ, ಅಂಥ ಅಪರಾಧಕ್ಕಾಗಿ ಈ ಅಧಿನಿಯಮದಲ್ಲಿ ಉಪಬಂಧಿಸಲಾದ ದಂಡದಿಂದ ದಂಡಿತನಾಗತಕ್ಕದ್ದು.

**15. ಅಧಿನಿಯಮದಡಿ ಅಧಿಕಾರಗಳನ್ನು ಚಲಾಯಿಸುವ ವ್ಯಕ್ತಿಗಳನ್ನು ಸಾರ್ವಜನಿಕ ನೌಕರರೆಂದು ಭಾವಿಸತಕ್ಕದ್ದು.–** ಈ ಅಧಿನಿಯಮದಡಿಯಲ್ಲಿ ಅಧಿಕಾರಗಳನ್ನು ಚಲಾಯಿಸುವ ಎಲ್ಲಾ ವ್ಯಕ್ತಿಗಳನ್ನು, ಭಾರತ ದಂಡ ಸಂಹಿತೆಯ 21ನೇ ಪ್ರಕರಣದಡಿಯ ಅರ್ಥದೊಳಗೆ ಸಾರ್ವಜನಿಕ ನೌಕರರೆಂದು ಭಾವಿಸತಕ್ಕದ್ದು.

**16. ಸದ್ಭಾವನೆಯಿಂದ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗಳ ರಕ್ಷಣೆ.–** ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ಮಾಡಿದ ನಿಯಮಗಳ ಅಡಿಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ, ಈ ಅಧಿನಿಯಮದ ಅಡಿಯಲ್ಲಿ ಅಧಿಕಾರಗಳನ್ನು ಚಲಾಯಿಸುವ ಸಕ್ಷಮ ಪ್ರಾಧಿಕಾರಿಯು ಅಥವಾ ಯಾವೊಬ್ಬ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಅಭಿಯೋಜನೆ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

**17. ವಿನಾಯಿತಿಗಳು.–** (1) ನಿಯಮಿಸಬಹುದಾದಂಥ ಷರತ್ತುಗಳಿಗೊಳಪಟ್ಟು, ಈ ಅಧಿನಿಯಮವು,–

(ಎ) ಯಾವುವೇ ಜಾನುವಾರನ್ನು, ರಾಜ್ಯ ಸರ್ಕಾರವು ಸ್ಥಾಪಿಸಿರುವ, ನಡೆಸುತ್ತಿರುವ ಅಥವಾ ಮಾನ್ಯತೆ ನೀಡಿರುವ ಒಂದು ಸಂಸ್ಥೆಯಲ್ಲಿ ಲಸಿಕೆ, ದೇವಿ ಹಾಕುವುದಕ್ಕಾಗಿ, ಸೀರಂಗಾಗಿ ಅಥವಾ ಯಾವುದೇ ಪ್ರಯೋಗಕ್ಕಾಗಿ ಅಥವಾ ಸಂಶೋಧನೆ ಉದ್ದೇಶಕ್ಕಾಗಿ ಪ್ರಯೋಗಕ್ಕೆ ಗುರಿಪಡಿಸಿದ್ದರೆ; ಅಥವಾ

(ಬಿ) ಯಾವುದೇ ಜಾನುವಾರನ್ನು,–

(i) ಅದರ ಹತ್ಯೆಯು, ಸಾರ್ವಜನಿಕ ಆರೋಗ್ಯದ ಹಿತಾಸಕ್ತಿಯಲ್ಲಿ ಅವಶ್ಯಕವಾಗಿದೆಯೆಂದು ರಾಜ್ಯ ಸರ್ಕಾರವು ಅಧಿಕೃತಗೊಳಿಸಿದ ಒಬ್ಬ ಪಶುವೈದ್ಯಾಧಿಕಾರಿಯು ಪ್ರಮಾಣೀಕರಿಸಿದ್ದರೆ;

(ii) ಅದು ಯಾವುದೇ ಸೋಂಕು ರೋಗದಿಂದ ಬಳಲುತ್ತಿದೆಂದು ಮತ್ತು ಅದು ಇತರ ಜಾನುವಾರುಗಳಿಗೆ ಅಪಾಯ ಉಂಟುಮಾಡುತ್ತದೆ ಎಂದು ರಾಜ್ಯ ಸರ್ಕಾರವು ಅಧಿಕೃತಗೊಳಿಸಿದ ಪಶುವೈದ್ಯಾಧಿಕಾರಿಯು ಪ್ರಮಾಣಿಕರಿಸಿದ್ದರೆ;

(ಸಿ) ಯಾವುದೇ ಜಾನುವಾರು, ಮರಣಾಂತಕವಾದ, ವಾಸಿಯಾಗದ ಖಾಯಿಲೆಯಿಂದ ಬಳಲುತ್ತಿದೆ ಎಂಬ ಕಾರಣದ ಮೇಲೆ ಯಾವುದೇ ಜಾನುವಾರಿನ ಹತ್ಯೆಯು ಅವಶ್ಯವಾಗಿದೆ, ಎಂದು,–

(i) ಕೇಂದ್ರ ಸರ್ಕಾರದ ರಕ್ಷಣಾ ಸಚಿವಾಲಯಕ್ಕೆ ಸೇರಿರುವ ಒಂದು ಜಾನುವಾರಿನ ಸಂದರ್ಭದಲ್ಲಿ, ಭಾರತೀಯ ಸೇನೆಯ ಪಶುವೈದ್ಯಾಧಿಕಾರಿಯು ಪ್ರಮಾಣೀಕರಿಸಿದ್ದರೆ,

(ii) ಯಾವುದೇ ಇತರ ಜಾನುವಾರಿನ ಸಂದರ್ಭದಲ್ಲಿ, ರಾಜ್ಯ ಸರ್ಕಾರದ ಪಶುವೈದ್ಯ ವಿಜ್ಞಾನದ ಸಹಾಯಕ ನಿರ್ದೇಶಕರು ಪ್ರಮಾಣೀಕರಿಸಿದ್ದರೆ;

– ಅನ್ವಯವಾಗತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದಡಿಯಲ್ಲಿ ಯಾವುದೇ ಜಾನುವಾರನ್ನು ಹತ್ಯೆ ಮಾಡಲಾಗಿದ್ದರೆ, ರಾಜ್ಯ ಸರ್ಕಾರವು ನಿಯಮಿಸಬಹುದಾದಂಥ ರೀತಿಯಲ್ಲಿ, ಪಶುಸಂಗೋಪನಾ ಇಲಾಖೆಯ ಸಹಾಯಕ ನಿರ್ದೇಶಕರ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಪಶುವೈದ್ಯ ಅಧಿಕಾರಿಯ ಮೇಲ್ವಿಚಾರಣೆಯಲ್ಲಿ ವಿಲೆಯಾಗತಕ್ಕದ್ದು.

**18. ಜಾನುವಾರುಗಳ ರಕ್ಷಣೆಗಾಗಿ ಸಂಸ್ಥೆಗಳ ಸ್ಥಾಪನೆ.–** (1) ರಾಜ್ಯ ಸರ್ಕಾರವು, ಕಳುಹಿಸಲಾಗಿರುವ ಜಾನುವಾರುಗಳ ಪಾಲನೆಗಾಗಿ ಅವಶ್ಯಕವೆಂದು ಭಾವಿಸಬಹುದಾದಂಥ ಸ್ಥಳಗಳಲ್ಲಿ ಅಂಥ ಸಂಸ್ಥೆಗಳನ್ನು ಸ್ಥಾಪಿಸಬಹುದು ಅಥವಾ ಸ್ಥಾಪಿಸುವಂತೆ ಯಾವುದೇ ಸ್ಥಳೀಯ ಪ್ರಾಧಿಕಾರಕ್ಕೆ ನಿರ್ದೇಶಿಸಬಹುದು ಅಥವಾ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ರ ಅಡಿಯಲ್ಲಿ ನೋಂದಣಿಯಾದ ಸಂಘಕ್ಕೆ ಅಥವಾ ಯಾವುದೇ ಅಸೋಸಿಯೇಷನ್‌ಗೆ ಅಥವಾ ಸಂಸ್ಥೆಗೆ ಅನುಮತಿಸಬಹುದು.

(2) ರಾಜ್ಯ ಸರ್ಕಾರವು, ಅಂಥ ಸಂಸ್ಥೆಗಳಲ್ಲಿರುವ ಜಾನುವಾರುಗಳ ರಕ್ಷಣೆಗಾಗಿ ಮತ್ತು ಅಲ್ಲಿಗೆ ಸೇರಿಸಲಾಗಿರುವ ಹಸುಗಳ ಅಥವಾ ಇತರ ಜಾನುವಾರುಗಳ ವರ್ಗಗಳಿಗೆ ಅಥವಾ ತಳಿಗಳ ರಕ್ಷಣೆಗೆ ಬೆಂಬಲ ನೀಡುವುದಕ್ಕಾಗಿ ಹಾಗೂ ಅಂಥ ಸಂಸ್ಥೆಯ ಸೂಕ್ತ ನಿರ್ವಹಣೆಗಾಗಿ ನಿಯಮಗಳನ್ನು ರಚಿಸಬಹುದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಒಂದು ಸಂಸ್ಥೆಯನ್ನು ಸ್ಥಾಪಿಸುವ, ರಾಜ್ಯ ಸರ್ಕಾರವು ಅಥವಾ ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಗೊಳಪಟ್ಟು, ಸ್ಥಳೀಯ ಪ್ರಾಧಿಕಾರ, ಸಂಘ ಅಥವಾ ವ್ಯಕ್ತಿಗಳ ನಿಕಾಯ ಅಥವಾ ಅಸೋಸಿಯೇಷನ್, ಅಂಥ ಸಂಸ್ಥೆಗಳ ನಿರ್ವಹಣೆಗಾಗಿ ನಿಯಮಿಸಬಹುದಾದಂತೆ ಅಂಥ ಶುಲ್ಕಗಳನ್ನು ವಿಧಿಸಬಹುದು.

**19. ನಿಯಮಗಳನ್ನು ರಚಿಸಲು ಅಧಿಕಾರ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಪೂರ್ವಪ್ರಕಟಣೆಯ ತರುವಾಯ, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕೆ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಪೂರ್ವೋಕ್ತ ಅಧಿಕಾರದ ಸಾಮಾನ್ಯನ್ವಯಕ್ಕೆ ಬಾಧಕವಾಗದಂತೆ, ಅಂಥ ನಿಯಮಗಳು ಈ ಮುಂದಿನವುಗಳಿಗಾಗಿ, ಎಂದರೆ:–

(ಎ) ಈ ಅಧಿನಿಯಮದಲ್ಲಿ, ಉಪಬಂಧಿಸಿದವುಗಳಿಗೆ ಹೆಚ್ಚಿಗೆಯಾಗಿ, ಸಕ್ಷಮ ಪ್ರಾಧಿಕಾರಿಯ ಅಧಿಕಾರಗಳು ಮತ್ತು ಕರ್ತವ್ಯಗಳು;

(ಬಿ) 7ನೇ ಪ್ರಕರಣದ (2)ನೇ ಉಪಪ್ರಕರಣದಡಿಯಲ್ಲಿ ಜಾನುವಾರುಗಳ ಸಾಗಣೆಗಾಗಿ ಪರ್ಮಿಟ್ಟುಗಳ ನಮೂನೆ;

(ಸಿ) ಈ ಅಧಿನಿಯಮವು 17ನೇ ಪ್ರಕರಣದ ಅಡಿಯಲ್ಲಿ ಯಾವ ಜಾನುವಾರುಗಳಿಗೆ ಯಾವ ಷರತ್ತುಗಳಿಗೊಳಪಟ್ಟು ಅನ್ವಯವಾಗತಕ್ಕದ್ದಲ್ಲವೋ ಆ ಷರತ್ತುಗಳು ;

(ಡಿ) ನಿಯಮಿಸತಕ್ಕ ಅಥವಾ ನಿಯಮಿಸಬಹುದಾದ ಯಾವುದೇ ಇತರ ವಿಷಯ.

– ಇವುಗಳ ಬಗ್ಗೆ ಉಪಬಂಧ ಕಲ್ಪಿಸಬಹುದು.

(3) ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ, ರಾಜ್ಯ ವಿಧಾನಮಂಡಲದ ಎರಡೂ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಲು ಒಪ್ಪಿದರೆ ಅಥವಾ ಆ ನಿಯಮವನ್ನು ರಚಿಸತಕ್ಕದ್ದಲ್ಲವೆಂದು ಎರಡೂ ಸದನಗಳು ಒಪ್ಪಿದರೆ ಅಂಥ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ದತಿಯು, ಈ ನಿಯಮದ ಅಡಿಯಲ್ಲಿ ಈ ಮುಂಚೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕ ಉಂಟುಮಾಡತಕ್ಕದ್ದಲ್ಲ.

**20. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಯನ್ನು ನಿವಾರಿಸುವುದಕ್ಕಾಗಿ ಅವಶ್ಯಕ ಅಥವಾ ಯುಕ್ತವೆಂದು ಅದಕ್ಕೆ ಕಂಡುಬರುವಂತೆ ಈ ಅಧಿನಿಯಮದ ಉಪಬಂಧಕ್ಕೆ ಅಸಂಗತವಾಗಿಲ್ಲದ ಉಪಬಂಧಗಳನ್ನು ಮಾಡಬಹುದು.

**21. ನಿರಸನ ಮತ್ತು ಉಳಿಸುವಿಕೆಗಳು.–** ಕರ್ನಾಟಕ ಗೋಹತ್ಯೆ ನಿಷೇಧ ಮತ್ತು ಜಾನುವಾರುಗಳ ಸಂರಕ್ಷಣೆ ಅಧಿನಿಯಮ, 1964 (1899ರ ಕರ್ನಾಟಕ ಅಧಿನಿಯಮ 3) ಈ ಮೂಲಕ ನಿರಸಿತವಾಗಿದೆ:

ಪರಂತು, ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899ರ (1899ರ ಕರ್ನಾಟಕ ಅಧಿನಿಯಮ III) 6ನೇ ಪ್ರಕರಣದ ಉಪಬಂಧಗಳು, ಸದರಿ ಅಧಿನಿಯಮದ ನಿರಸನದ ಸಂಬಂಧದಲ್ಲಿ ಅನ್ವಯವಾಗತಕ್ಕದ್ದು ಮತ್ತು ಸದರಿ ಕಾನೂನಿನ ಮತ್ತು ಸದರಿ ಅಧಿನಿಯಮದ 8 ಮತ್ತು 24ನೇ ಪ್ರಕರಣಗಳ ಉಪಬಂಧಗಳು ಸದರಿ ಅಧಿನಿಯಮವನ್ನು ಈ ಅಧಿನಿಯಮದ ಮೂಲಕ ನಿರಸನಗೊಳಿಸಿದ್ದರೆ ಮತ್ತು ಪುನಃ ಅಧಿನಿಯಮಿಸಲಾಗಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಭಾರತ ಸಂವಿಧಾನದ 48ನೇ ಅನುಚ್ಛೇದಕ್ಕೆ ಅನುಸಾರವಾಗಿ ಹಸುಗಳ ಮತ್ತು ಹಸು ಅಥವಾ ಎಮ್ಮೆ ಕರುಗಳ, ಎತ್ತು, ಹೋರಿ, ಎಮ್ಮೆ ಅಥವಾ ಕೋಣ ಇವುಗಳ ಹತ್ಯೆಯನ್ನು ನಿಷೇಧಿಸುವುದಕ್ಕಾಗಿ ಮತ್ತು ಜಾನುವಾರಗಳ ತಳಿಗಳನ್ನು ಸಂರಕ್ಷಿಸಿ ಸುಧಾರಿಸುವುದಕ್ಕಾಗಿ ಹಾಗೂ ಕೃಷಿ ಮತ್ತು ಪಶುಸಂಗೋಪನೆಯನ್ನು ಸಂಘಟಿಸಲು ಪ್ರಯತ್ನಿಸುವುದಕ್ಕಾಗಿ ಕರ್ನಾಟಕ ಗೋಹತ್ಯೆ ಪ್ರತಿಬಂಧ ಮತ್ತು ಜಾನುವಾರು ಸಂರಕ್ಷಣೆ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 35) ಒಂದು ಸಮಗ್ರ ಶಾಸನವನ್ನು ಅಧಿನಿಯಮಿಸುವ ಮೂಲಕ ಪ್ರತಿಸ್ಥಾಪಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಅಧಿನಿಯಮದ ಉಲ್ಲಂಘನೆಗಾಗಿ ಕಠಿಣ ಶಿಕ್ಷೆಯನ್ನು ವಿಧಿಸುವುದಕ್ಕೆ ವಿಧೇಯಕವು ಉಪಬಂಧವನ್ನು ಕಲ್ಪಿಸುತ್ತದೆ ಮತ್ತು ನೌಕೆ ಅಥವಾ ವಾಹನವೂ ಒಳಗೊಂಡಂತೆ, ಯಾವುದೇ ಆವರಣದ ಶೋಧನೆ ಮಾಡಲು ಮತ್ತು ಮುಟ್ಟುಗೋಲು ಹಾಕಿಕೊಳ್ಳಲು ಅಧಿಕಾರವನ್ನು ನೀಡುತ್ತದೆ.

ಆದ್ದರಿಂದ ಈ ವಿಧೇಯಕ.

### ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಲಗೊಂಡಿರುವುದಿಲ್ಲ.

### ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತು ಜ್ಞಾಪನ ಪತ್ರ

1) **ಖಂಡ 7:** 7ನೇ ಖಂಡದ (2)ನೇ ಉಪಖಂಡವು ಪರ್ಮಿಟ್ಟಿನ ನಮೂನೆ ಮತ್ತು ಜಾನುವಾರುಗಳ ಸಾಗಣೆಗಾಗಿ ಶುಲ್ಕವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

2) **ಖಂಡ 17:** 17ನೇ ಖಂಡದ (1)ನೇ ಉಪಖಂಡವು ಯಾವ ಷರತ್ತುಗಳಿಗೆ ಒಳಪಟ್ಟು ಈ ಅಧಿನಿಯಮದ ಉಪಬಂಧಗಳಿಂದ ವಿನಾಯತಿಗಳನ್ನು ನೀಡಬಹುದು ಎಂಬ ಬಗ್ಗೆ ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

   17ನೇ ಖಂಡದ (2)ನೇ ಉಪಖಂಡವು ಹತ್ಯೆಗೆ ಒಳಗಾದ ಜಾನುವಾರನ್ನು ವಿಲೆ ಮಾಡುವ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

3) **ಖಂಡ 18:** 18ನೇ ಖಂಡದ (3)ನೇ ಉಪಖಂಡವು ರಾಜ್ಯ ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ, ಸಂಘ ಅಥವಾ ವ್ಯಕ್ತಿಗಳ ನಿಕಾಯ ಅಥವಾ ಅಸೋಸಿಯೇಷನ್‌ಗಳು (1)ನೇ ಉಪ ಪ್ರಕರಣದ ಅಡಿಯಲ್ಲಿ ಒಂದು ಸಂಸ್ಥೆಯನ್ನು ಸ್ಥಾಪಿಸುವುದಕ್ಕಾಗಿ ವಿಧಿಸಬಹುದಾದ ಶುಲ್ಕಗಳನ್ನು ನಿಯಮದ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ, ಅಧಿಕಾರವನ್ನು ನೀಡುತ್ತದೆ.

4) **ಖಂಡ 19:** 19ನೇ ಖಂಡದ (2)ನೇ ಉಪ ಖಂಡದ (ಡಿ) ಬಾಬು ಈ ಅಧಿನಿಯಮದ ಉಪಬಂಧಗಳ ಉದ್ದೇಶವನ್ನು ಈಡೇರಿಸುವುದಕ್ಕಾಗಿ ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ರೇವುನಾಯಕ ಬೆಳಮಗಿ**
ಪಶುಸಂಗೋಪನಾ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**FIFTH SESSION**

## THE KARNATAKA PREVENTION OF SLAUGHTER AND PRESERVATION OF CATTLE BILL, 2010

**(L.A. Bill No. 04 of 2010)**

A Bill to provide for a comprehensive legislation for the prevention of slaughter and preservation of cattle in the State of Karnataka.

Whereas it is expedient to provide a comprehensive legislation for the prevention of slaughter and preservation of cattle in the State of Karnataka;

Be it enacted by the Karnataka State Legislature in the sixty first year of the Republic of India, as follows:-

**1. Short title and commencement.-** (1) This Act may be called the Karnataka Prevention of Slaughter and Preservation of Cattle Act, 2010.

(2) It shall come into force on such date as the State Government may, by notification, appoint.

**2. Definitions.**- In this Act, unless the context otherwise requires,-

(1) "Beef" means flesh of the cattle in any form;

(2) "Cattle" means cow, calf of a cow and bull, bullock, buffalo male or female and calf of she buffalo;

(3) "Competent authority" means the competent authority appointed under section 3;

(4) "Notification" means a notification published in the official Gazette;

(5) "Premises" means and includes any premises, vessel or vehicle;

(6) "Prescribed" means prescribed by rules made under this Act.

**3. Appointment of competent authority.-** The State Government may, by notification, appoint the Tahasildar of a Revenue Taluk or an officer of the Animal Husbandry Department not below the rank of Assistant Director to perform the functions of the competent authority under this Act for such local area as may be specified in such notification.

**4. Prohibition of slaughter of cattle.-** Notwithstanding anything contained in any law, custom, or usage to the contrary, no person shall slaughter or cause to be slaughtered, or offer or cause to be offered for slaughter or otherwise intentionally kill or offer or cause to be offered for killing any cattle.

**5. Prohibition of sale, usage and possession of beef.-** Notwithstanding anything contrary contained in any law, no person shall posses, sell or transport or cause to be transported, the beef or beef products.

**6. Restriction on transport of cattle.-** No person shall transport or offer for transport or cause to be transported by whatever means any cattle from any place within the State to any other place within the State for slaughter:

Provided that the transport of any cattle, in the manner prescribed by the State Government or Central Government, for bona-fide agricultural or animal husbandry purpose shall not be construed as an offence under this section.

**7. Restriction on transport of cattle outside the State**.- (1) No person shall transport or offer to transport or cause to be transported by whatever means cattle from any place within the State to outside the State for the purpose of slaughter:

Provided that the Taluk Magistrate may issue permit for transport of cattle for bona-fide agricultural or animal husbandry purposes:

Provided further that the cattle shall be transported in the manner prescribed by the Central Government by rules governing the transport of cattle under the Prevention of Cruelty to Animals Act, 1960 (Central Act 59 of 1960).

(2) The permit issued under sub-section (1) shall be in such form and in such manner, and subject to payment of such fee as may be prescribed.

**8. Prohibition of sale, purchase or disposal of cattle for slaughter.-** No person shall purchase, sell or otherwise dispose of or offer to purchase, sell or otherwise dispose of or cause to be purchased, sold or otherwise disposed of, cattle for slaughter or knowing or having reason to believe that such cattle shall be slaughtered.

**9. Power of search and seizure.-** (1) Where a Police Officer not below the rank of Sub-Inspector or a Competent Authority has reason to believe that an offence under this Act has been committed has power to inspect and seize such cattle and premises and materials used or intended to be used for the commission of such offence.

(2) Every person in occupation of any such premises shall allow the competent authority or an Officer not below the rank of Sub-Inspector such access to the premises as may be necessary for the aforesaid purpose and shall answer to the best of his knowledge and belief any questions put to him by the police Officer not below the rank of Sub-Inspector or the competent authority.

(3) After the seizure under sub-section (1), he shall report such seizure, without unreasonable delay before the Sub-Divisional Magistrate for confiscation.

(4) On receipt of the report, records relating to premises and materials used or intended to be used in the commission of the offence, the Sub-Divisional Magistrate may on his being satisfied that an offence has been committed or intended to be committed under this Act, may release the materials including vehicle except cattle on production of a Bank guarantee equal to the value as estimated by him pending disposal of the criminal proceedings instituted in respect of the alleged offence and on the execution of Bank guarantee by the owner thereof of a bond for the production of the property so released as and when so required before the magistrate having jurisdiction to try the offence on account of which the seizure had been made and order for handing over the cattle to an institution established under section 18.

(5) On receipt of report of such seizure records relating to premises and materials used or intended to be used in the commission of the offence, the Sub-Divisional Magistrate may on his being satisfied that an offence has been committed or intended to be committed under this Act, whether a prosecution is instituted for such offence or not pass such orders confiscating the same:

Provided that no such order shall be made without giving an opportunity of being heard to the person committed the offence.

(6) While making an order for confiscation under sub-section (5), the Sub-Divisional Magistrate may also order that such of the properties to which the order of confiscation relates which in his opinion cannot be preserved or are not fit for human consumption be destroyed.

(7) The Sub-Divisional Magistrate in his opinion feels that it is expedient in the public interest so to do, may sell the confiscated premises in public auction.

(8) When any confiscated property is sold as aforesaid, the proceeds thereof, after deduction of the expenses of any such auction or other incidental expenses, relating thereto, shall, where the order of confiscation is made under sub-section (5) is set aside or annulled by the appellate court be paid to the owner thereof or to the person from whom it was seized as may be specified in such order.

(9) When such order of confiscation passed under sub-section (5) has become final and the appellate court confirms such order in respect of the whole or any portion of such property, such property or portion thereof, as the case may be shall vest in the State Government.

(10) The confiscated cattle shall be handed over to an institution established under section 18 and shall not in any circumstances be handed over to the accused or sold in public auction.

**10. Appeals.-** (1) Any person aggrieved by any order passed under section 9 may, within 30 days from the date of receipt of such order appeal to the Sessions Judge having jurisdiction over the area in which the property to which such order relates has been seized.

(2) The Sessions judge may after giving the persons affected a reasonable opportunity of being heard, pass such order as it deems fit.

**11. Bar of jurisdiction in certain cases.-** Whenever any cattle and premises and materials used or intended to be used for the commission of such offence and detained under the provisions of this Act, the Sub-Divisional Magistrate or the Sessions Judge hearing an appeal under section 10 shall have and any other officer or court, tribunal or authority shall not have jurisdiction to make orders with regard to the custody, possession, delivery, disposal or distribution of such property.

**12. Penalties.-** (1) Whoever contravenes the provisions of section 4 of this Act, shall, on conviction, be punished with imprisonment which shall not be less than one year but which may extends to seven years or with a fine which shall not be less than twentyfive thousand rupees but which may extend to fifty thousand rupees or with both. In the case of second and subsequent offence with a further fine which shall not be less than fifty thousand rupees but which may extend to one lakh rupees along with penalty of imprisonment.

(2) Whoever contravenes any of the provisions other than section 4 of the Act, shall, on conviction, be punished with imprisonment which shall not be less than One year but which may extend to three years or with fine which shall not be less than Ten thousand rupees but which may extend to twenty five thousand rupees or with both.

**13. Offences under the Act to be cognizable.-** All offences under this Act, shall be cognizable and non-bailable and triable by the court of Judicial Magistrate First Class.

**14. Abetment.-** Whoever abets any offence punishable under this Act or attempts to commit any such offence, shall be punished with the punishment provided in this Act for such offence.

**15. Persons exercising powers under the Act deemed to be public servants.-** All persons exercising powers under this Act shall be deemed to be public servants within the meaning of section 21 of the Indian Penal Code.

**16. Protection of persons acting in good faith.-** No suit, prosecution or other legal proceedings shall be instituted against the competent authority or any person exercising powers under this Act for anything which is in good faith done or intended to be done under this Act or the rules made thereunder.

**17. Exemptions.-** (1) Subject to such conditions as may be prescribed, this Act shall not apply to,-

(a) any cattle operated upon for vaccine lymph, serum or for any experimental or research purpose at an institution established, conducted or recognised by the State Government; or

(b) any cattle,-

(i) slaughter of which is certified by a Veterinary Officer authorised by the State Government, to be necessary in the interest of the public health;

(ii) which is suffering from any disease which is certified by a Veterinary Officer authorised by the State Government as being contagious and dangerous to other cattle;

(c) any cattle, slaughter of which is certified to be necessary on the ground that it is suffering from an incurable disease as terminally ill,-

(i) in the case of a cattle belonging to the Central Government in the Ministry of Defence, by a Veterinary Officer of the Indian Army;

(ii) in the case of any other cattle, by a Assistant Director of Veterinary Science of the State Government.

(2) Any cattle slaughtered under sub-section (1), shall be disposed of under the supervision of the veterinary officer not below the rank of Assistant Director, the Department of Animal Husbandry in such manner as may be prescribed.

**18. Establishment of institutions for taking care of cattle.-** (1) The State Government may establish, or direct any local authority or permit society registered under the Karnataka Societies Registration Act, 1960, or any association or organization to establish institutions at such places as may be deemed necessary for taking care of the cattle to be sent thereto.

(2) The State Government may provide by rules for the proper management of such institutions for the care of cattle therein and provide support for the class or variety of cows or other cattle that may be admitted herein.

(3) The State Government or subject to the previous sanction of the State Government, the local authority, society or body of persons or association establishing an institution under sub-section (1), may levy such fees as may be prescribed for the maintenance of such institutions.

**19. Power to make rules.-** (1) The State Government may, by notification, after previous publication, make rules for carrying out the purposes of this Act.

(2) In particular and without prejudice to the generality of the foregoing power, such rules may provide for,-

(a) the powers and duties of competent authority, in addition to those provided in this Act;

(b) the form of permits for transportation of cattle under sub-section (2) of section 7;

(c) the conditions subject to which this Act shall not apply to any cattle under section 17;

(d) any other matter which is to be or may be prescribed.

(3) Every rule made under this section shall be laid as soon as may be after it is made before each House of the State Legislature while it is in session for a total period of thirty days which may be comprised in one session or in two or more successive sessions, and if before the expiry of the session in which it is so laid or the session immediately following, both Houses agree in making any modification in the rule or both Houses agree that the rule should not be made, the rule shall thereafter have effect only in such modified form or be of no effect, as the case may be; so however, that any such modification or annulment shall be without prejudice to the validity of anything previously done under that rule.

**20. Power to remove difficulties.-** If any difficulty arises in giving effect to the provisions of this Act, the State Government may by order published in the official Gazette make provisions not inconsistent with the provisions of this Act as it appear to be necessary or expedient for removing the difficulty:

**21. Repeal and savings.**- The Karnataka Prevention of Cow Slaughter and Cattle Preservation Act, 1964 (Karnataka Act 35 of 1964) is hereby repealed:

Provided that the provisions of section 6 of the Karnataka General Clauses Act, 1899 (Karnataka Act III of 1899) shall be applicable in respect of the repeal of the said enactment and sections 8 and 24 of the said Act shall be applicable as if the said enactment had been repealed and re-enacted by this Act.

**STATEMENT OF OBJECTS AND REASONS**

It is considered necessary to replace the Karnataka Prevention of cow slaughter and cattle preservation Act, 1964 (Karnataka Act 35 of 1964) to prohibit the slaughter of cows and calves of she-buffaloes, bull, bullock, buffalo male or female and for the preservation and improvement of the breeds of cattle and to endeavour to organize agriculture and animal husbandry in terms of Article 48 of the constitution of India, by enacting a comprehensive legislation.

The Bill provides for stringent punishment for violation of the Act, and also provides for powers to search and seizure of any premises which includes Vessel or Vehicle.

Hence the Bill.

**FINANCIAL MEMORANDUM**

There is no extra expenditure involved in the proposed Legislative measure.

**MEMORANDUM REGARDING DELEGATED LEGISLATION**

**(1) Clause 7**: Sub clause (2) of clause 7 empowers the State Government to prescribe by rules the form of permits and fees for transportation of cattle.

**(2) Clause 17**: Sub-clause (1) of clause 17 empowers the State Government to prescribe by rules the conditions subject to which exemptions may be granted from the provisions of this Act.

Sub clause (2) of clause 17 empowers the State Government to prescribe by rules manner of disposal of the cattle slaughtered.

**(3) Clause 18:** Sub-clause (3) of clause 18 empowers the State Government to prescribe by rules the fee that may be levied by State Government or a local authority, society or body of persons or association establishing an institution under sub-section(1).

**(4) Clause 19:** Sub-clause (2) item (d) of clause 18 empowers the State Government to make rules after previous publication to carryout the purpose of the provisions of this, Act.

The above delegation of Legislative power is normal in character.

**REVUNAYAKA BELAMAGI**
Minister for Animal Husbandry

**S.B. PATIL**
Secretary
Karnataka Legislative Assembly

**S.B. PATIL**
Secretary, Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಮಂಗಳವಾರ, ಮಾರ್ಚ್ ೯, ೨೦೧೦ (ಫಾಲ್ಗುಣ ೧೮, ಶಕ ವರ್ಷ ೧೯೩೧) | ನಂ. ೨೩೬ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/32/Bill/2010, Bangalore, Dated : 9th March, 2010**

The following Bill was introduced in Legislative Assembly on 9th March, 2010.

**THE KARNATAKA STAMP (AMENDMENT) BILL, 2010**
**(L.A. Bill No. 01 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಐದನೇ ಅಧಿವೇಶನ**

**ಕರ್ನಾಟಕ ಸ್ಟಾಂಪು (ತಿದ್ದುಪಡಿ) ವಿಧೇಯಕ, 2010**
**(2010ನೇ ವಿಧಾನಸಭೆಯ ವಿಧೇಯಕ ಸಂಖ್ಯೆ 01)**

ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ 34) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು, ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯದ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು :–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಸ್ಟಾಂಪು (ತಿದ್ದುಪಡಿ) ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 9ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಸ್ಟಾಂಪು ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 34) 9ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದಲ್ಲಿ ಎರಡನೇ ಪರಂತುಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು ಎಂದರೆ :–

"ಮತ್ತು ಪರಂತು, ರಾಜ್ಯ ಸರ್ಕಾರವು ಸಾರ್ವಜನಿಕ ಹಿತದೃಷ್ಟಿಯಿಂದ, ವಿಶೇಷ ಆರ್ಥಿಕ ವಲಯ ಅಭಿವೃದ್ಧಿದಾರ, ಸಹ ಅಭಿವೃದ್ಧಿದಾರ, ಭೂಮಾಲೀಕರು, ಕರ್ನಾಟಕ ಕೈಗಾರಿಕಾ ಅಭಿವೃದ್ಧಿ ಮಂಡಳಿ ಮತ್ತು ಸರ್ಕಾರಿ ಆದೇಶ ಸಂಖ್ಯೆ ಸಿಐ 114 ಎಸ್‌ಪಿಐ 2007, ದಿನಾಂಕ 28–2–2009ರಲ್ಲಿ ಪರಿಭಾಷಿಸಿದಂತೆ ಹಣಕಾಸು ಸಂಸ್ಥೆಗಳು ಇವುಗಳಿಂದ ಅಥವಾ ಇವುಗಳ ನಡುವಿನ ಯಾವುದೇ ಲಿಖಿತದ ಮೇಲೆ ಸಂದಾಯವಾಗತಕ್ಕ ಸ್ಟಾಂಪು ಶುಲ್ಕವನ್ನು ಅಧಿಸೂಚನೆ ಮೂಲಕ ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಕಡಿಮೆಗೊಳಿಸಬಹುದು ಅಥವಾ ಮಾಫಿ ಮಾಡಬಹುದು.

ಮತ್ತು ಪರಂತು, ರಾಜ್ಯ ಸರ್ಕಾರವು, ಸಾರ್ವಜನಿಕ ಹಿತದೃಷ್ಟಿಯಿಂದ, ಅಧಿಸೂಚನೆಯ ಮೂಲಕ ಅದರಲ್ಲಿ ನಿರ್ದಿಷ್ಟಪಡಿಸಿದ ಹೊಸ ಮತ್ತು ಪ್ರಸ್ತುತ ಇರುವ ಮೈಕ್ರೋ, ಸಣ್ಣ, ಮಧ್ಯಮ ಉದ್ಯಮಗಳು, ದೊಡ್ಡ ಕೈಗಾರಿಕಾ ಘಟಕಗಳು ಮತ್ತು ಬೃಹತ್ ಯೋಜನೆಗಳು ವಿಸ್ತರಣೆ ಅಥವಾ ಆಧುನೀಕರಣ ಅಥವಾ ಬದಲಾವಣೆಗಳ ಯೋಜನೆಗಳನ್ನೂ ಒಳಗೊಂಡಂತೆ ಸರ್ಕಾರಿ ಆದೇಶ ಸಂಖ್ಯೆ ಸಿಐ 233 ಎಸ್‌ಪಿಐ 2008, ದಿನಾಂಕ 28–2–2009 ರಲ್ಲಿ ಪರಿಭಾಷಿಸಿದಂತೆ, ಕರ್ನಾಟಕ ಕೈಗಾರಿಕಾ ನೀತಿ 2009–14 ಅಥವಾ ಸದರಿ ನೀತಿಯಲ್ಲಿ ಪರಿಭಾಷಿಸಿದಂತೆ ಅಂಥ ಪ್ರದಾನ ಕ್ಷೇತ್ರದ ಪ್ರಮುಖ ಯೋಜನೆಗಳ ಅಥವಾ ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂತೆ, ಇವರುಗಳು ಬರೆದುಕೊಟ್ಟ ಯಾವುದೇ ಲಿಖಿತದ ಮೇಲೆ ಸಂದಾಯವಾಗುವ ಸ್ಟಾಂಪು ಶುಲ್ಕವನ್ನು 2014ರ ಮಾರ್ಚ್ 31ರವರೆಗೆ ಕಡಿಮೆಗೊಳಿಸಬಹುದು ಅಥವಾ ಮಾಫಿ ಮಾಡಬಹುದು."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಚಾಲ್ತಿಯಲ್ಲಿರುವ ಜಾಗತಿಕ, ಆರ್ಥಿಕ ಮುಗ್ಗಟ್ಟಿನೊಡನೆ ಹೋರಾಡಲು ಮತ್ತು 2009–14ನೇ ಸಾಲಿನ ಹೊಸ ಕೈಗಾರಿಕಾ ನೀತಿಯ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಹೊಸ ಕೈಗಾರಿಕೆಗಳ ಸ್ಥಾಪನೆಗಾಗಿ ಉದ್ಯಮಿಗಳನ್ನು ಪ್ರೋತ್ಸಾಹಿಸುವುದಕ್ಕಾಗಿ ವಿಶೇಷ ಆರ್ಥಿಕ ವಲಯದಲ್ಲಿಯ ಪ್ರದಾನ ಕ್ಷೇತ್ರದ ಪ್ರಮುಖ ಯೋಜನೆಗಳು ಬರದುಕೊಡುವ ಯಾವುದೇ ಲಿಖಿತದ ಮೇಲೆ ಸಂದಾಯ ಮಾಡುವ ಸ್ಟಾಂಪು ಶುಲ್ಕವನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಕಡಿಮೆಗೊಳಿಸಲು ಅಥವಾ ಮಾಫಿ ಮಾಡಲು ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಸುಮಾರು 200 ಕೋಟಿ ರೂಪಾಯಿಗಳ ವೆಚ್ಚವನ್ನು ಒಳಗೊಂಡಿರುತ್ತದೆ.

**ಜಿ. ಕರುಣಾಕರ ರೆಡ್ಡಿ**
ಕಂದಾಯ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಸ್ಟಾಂಪು ಅಧಿನಿಯಮ, 1957 (1957ರ ಕರ್ನಾಟಕ ಅಧಿನಿಯಮ, 34) ಉದ್ಧೃತ ಭಾಗ**

9. ಸುಂಕಗಳನ್ನು ಕಡಿಮೆ ಮಾಡಲು, ಮಾಫಿ ಮಾಡಲು ಅಥವಾ ಅವುಗಳ ಬಗ್ಗೆ ರಾಜಿಮಾಡಿಕೊಳ್ಳಲು ಅಧಿಕಾರ.– (1) xx xx

(ಎ) xx xx

ಮತ್ತು ಪರಂತು, ರಾಜ್ಯ ಸರ್ಕಾರವು ಸಾರ್ವಜನಿಕ ಹಿತದೃಷ್ಟಿಯಿಂದ ಸರ್ಕಾರಿ ಆದೇಶ ಸಿಐ 319 ಎಸ್‌ಪಿಐ 2005, ದಿನಾಂಕ 26.8.2006 ರಲ್ಲಿ ನಿರ್ದಿಷ್ಟಪಡಿಸಲಾದ ಅಥವಾ ಸದರಿ ನೀತಿಯಲ್ಲಿ ಪರಿಭಾಷಿಸಲಾದಂತೆ ಮುಖ್ಯ ಪ್ರದೇಶದ ಪ್ರಮುಖ ಯೋಜನೆಗಳ ಮೂಲಕ ನಿರ್ದಿಷ್ಟಪಡಿಸಲಾದಂತೆ ಅಥವಾ ಕಾಲಕಾಲಕ್ಕೆ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಲಾದಂತೆ ಹೊಸ ಕೈಗಾರಿಕಾ ನೀತಿಯಲ್ಲಿ ನಿರ್ದಿಷ್ಟಪಡಿಸಲಾದಂತೆ ಹೊಸ ಅಡಿ ಸಣ್ಣ ಪ್ರಮಾಣದ, ಸಣ್ಣ ಪ್ರಮಾಣದ, ಮಧ್ಯಮ ಪ್ರಮಾಣದ ಅಥವಾ ಬೃಹತ್ ಪ್ರಮಾಣದ ಕೈಗಾರಿಕಾ ಘಟಕಗಳು ಅಥವಾ ಮಹಾಯೋಜನೆಗಳನ್ನು ಅದರಲ್ಲಿ ನಿರ್ದಿಷ್ಟಪಡಿಸಲಾದಂತೆ ಕಾರ್ಯರೂಪಕ್ಕೆ ತರುವ ಯಾವುದೇ ಲಿಖಿತ ಪತ್ರದ ಮೇಲೆ ಸಂದಾಯ ಮಾಡತಕ್ಕ ಸ್ಟಾಂಪು ಸುಂಕವನ್ನು ಅಧಿಸೂಚನೆಯ ಮೂಲಕ 31ನೇ ಮಾರ್ಚ್ 2011ರವರೆಗೆ ಕಡಿತಗೊಳಿಸಬಹುದು ಅಥವಾ ಮಾಫಿಮಾಡಬಹುದು.

xx xx xx xx

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**FIFTH SESSION**

**THE KARNATAKA STAMP (AMENDMENT) BILL, 2010**

**(L.A. Bill No. 01 of 2010)**

A Bill further to amend the Karnataka Stamp Act, 1957.

Whereas, it is expedient further to amend the Karnataka Stamp Act, 1957 (Karnataka Act 34 of 1957) for the purposes hereinafter appearing ;

Be it enacted by the Karnataka State Legislature in the sixty first year of the Republic of India, as follows :-

**1. Short title and Commencement.-** (1) This Act may be called the Karnataka Stamp (Amendment) Act, 2010.

(2) It shall come into force at once.

**2. Amendment of Section 9.-** In the Karnataka Stamp Act, 1957 (Karnataka Act No. 34 of 1957) in section 9, in sub-section (1), in clause (a), for the second proviso the following shall be substituted, namely :-

> "Provided further that the State Government may, in public interest, by notification, reduce or remit the stamp duty payable on any instrument to be specified therein, executed by or between Special Economic Zone Developer, Co-Developer, Land Owners, Karnataka Industrial Areas Development Board and Financial Institutions as defined in the State policy for Special Economic Zones – 2009, vide Government Order No. CI 114 SPI 2007, Bangalore, dated: 28-02-2009.
>
> Provided also that the State Government may, in public interest, by notification, reduce or remit, till 31st March 2014, the stamp duty payable on any instrument to be specified therein executed by specified new and existing micro, small, medium enterprises, Large Scale Industrial Units and mega projects including expansion or modernization or diversification projects, as defined in the Karnataka Industrial Policy 2009-14 specified in the Government Order No. CI 233 SPI 2008, Dated: 28-02-2009 or by such key projects of core area as defined in the said policy or specified by State Government from time to time".

**STATEMENT OF OBJECTS AND REASONS**

In order to encourage entrepreneurs for establishment of new industries in the State to combat financial crisis prevailing globally and in the hight of the new Industrial Policy 2009-14, it is proposed to amend the Karnataka Stamp Act, 1957, to reduce or remit stamp duty in public interest payable on any instrument executed by key projects of core area in the special economic zones.

Hence the Bill.

## FINANCIAL MEMORANDUM

There will be an approximate expenditure of Rs. 200/- Crores involved in the proposed legislative measure.

**G. KARUNAKARA REDDY**
Minister for Revenue

**S.B. PATIL**
Secretary
Karnataka Legislative Assembly

## ANNEXURE

**Extract from the Karnataka Stamp Act, 1957**

**(Karnataka Act 32 of 1957)**

**xxx xxx xxx**

9(1)(a) xxx

Provided further that the State Government may in public interest reduce or remit by notification till 31st March 2011, the stamp duty payable on any instrument, to be specified therein executed by, specified new tiny, small scale, medium scale or large scale industrial Units or Mega projects as defined in the New Industrial Policy specified in Government Order CI 319 SPI 2005, dated: 26.08.2006 or by such key projects of core area as defined in the said policy or specified by the State Government from time to time.

**xxx xxx xxx**

**S.B. PATIL**
Secretary
Karnataka Legislative Assembly


# ವಿಶೇಷ ಪತ್ರಿಕೆ

ಭಾಗ – VI | ಬೆಂಗಳೂರು, ಬುಧವಾರ, ಮಾರ್ಚ್ ೧೦, ೨೦೧೦ (ಫಾಲ್ಗುಣ ೧೯, ಶಕ ವರ್ಷ ೧೯೩೧) | ನಂ. ೨೩೭


## OFFICE OF THE PRINCIPAL CENSUS OFFICER & DEPUTY COMMISSIONER, CHITRADURGA DISTRICT

## NOTIFICATION

**No. CENSUS/CR 08/2009-10, Date: 01.03.2010**

In exercise of the powers delegated by Government in their Notification No.RD 20 ETC 2009 dated 2.12.2009, the undersigned under sub-section (2) of Section 4 of the India Census Act, 1948 (Central Act No.37 of 1948) hereby appoints the Officer noted in col.3 as Assistant District Census Officer with Designation noted in col.4 for the jurisdiction noted in col.(5) of the table given below for the purpose of 2011 Census.

| Sl. No. | Administrative Unit | Designation | To be appointed as | Jurisdiction |
|---|---|---|---|---|
| **1** | **2** | **3** | **4** | **5** |
| 1 | Chitradurga District | Deputy Director of Public Instruction | Assistant District Census Officer | Entire district |

**Amlan Aditya Biswas**
Deputy Commissioner &
District Principal Census Officer
Chitradurga District, Karnataka

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಬುಧವಾರ, ಮಾರ್ಚ್ ೧೦, ೨೦೧೦ (ಫಾಲ್ಗುಣ ೧೯, ಶಕ ವರ್ಷ ೧೯೩೧) | ನಂ. ೨೩೮ |
|---|---|---|

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕೆಎಲ್‌ಸಿಎಸ್/ಎಡಿಎಂ–1/01/ವೃ ಮತ್ತು ನೇ/2010, ಬೆಂಗಳೂರು, ದಿ: 10ನೇ ಮಾರ್ಚ್, 2010**

ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ ವಿಶೇಷ ಮಂಡಳಿಯು, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ ಸಂಖ್ಯೆ: 14) ರ 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ರಚಿಸಲು ಉದ್ದೇಶಿಸಿರುವ, ಕರ್ನಾಟಕ ವಿಧಾನ ಪರಿಷತ್ತು ಸಚಿವಾಲಯ (ನೇಮಕಾತಿ ಮತ್ತು ಸೇವಾ ಷರತ್ತುಗಳ) ನಿಯಮಗಳು, 2010ರ ಕರಡನ್ನು, ಸದರಿ ಪ್ರಕರಣದ (2) ನೇ ಉಪ ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯ ದಿನಾಂಕ: 23.01.2010ರ ಭಾಗ IV- ಎ ನಲ್ಲಿ, ಅಧಿಸೂಚನೆ ಸಂಖ್ಯೆ: ಕೆಎಲ್‌ಸಿಎಸ್/ಎಡಿಎಂ–1/01/ವೃ ಮತ್ತು ನೇ/2010, ದಿ:22.01.2010 ರಲ್ಲಿ, ಅದರ ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ, ಅದರಿಂದ ಬಾಧಿತರಾಗುವ ಸಾಧ್ಯತೆ ಇರುವ ವ್ಯಕ್ತಿಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿ, ಪ್ರಕಟಿಸಲಾಗಿದೆ.

ಸದರಿ ರಾಜ್ಯಪತ್ರವು ದಿನಾಂಕ: 23.01.2010ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲಾಗಿದೆ.

ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಸ್ವೀಕರಿಸಿದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಮಾನ್ಯ ವಿಶೇಷ ಮಂಡಳಿಯು ಪರಿಗಣಿಸಿದೆ.

ಆದ್ದರಿಂದ, ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 ( 1990ರ ಕರ್ನಾಟಕ ಅಧಿನಿಯಮ ಸಂಖ್ಯೆ: 14) ರ 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ವಿಧಾನ ಪರಿಷತ್ತಿನ ವಿಶೇಷ ಮಂಡಳಿಯು ಈ ಮುಂದಿನ ನಿಯಮಗಳನ್ನು ರಚಿಸುತ್ತದೆ.

**ನಿಯಮಗಳು**

**1) ಹೆಸರು ಮತ್ತು ಪ್ರಾರಂಭ:**

1. ಈ ನಿಯಮಗಳನ್ನು ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ (ನೇಮಕಾತಿ ಮತ್ತು ಸೇವಾ ಷರತ್ತುಗಳು) (ನಾಲ್ಕನೇ ತಿದ್ದುಪಡಿ) ನಿಯಮಗಳು, 2010 ಎಂದು ಕರೆಯತಕ್ಕದ್ದು.

2. ಈ ನಿಯಮಗಳು, ಅಧಿಕೃತ ರಾಜ್ಯಪತ್ರದಲ್ಲಿ ಅವುಗಳ ಪ್ರಕಟಣೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2) ಅನುಸೂಚಿ–1 ರ ತಿದ್ದುಪಡಿ:–**

ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 2003ರ 1ನೇ ಅನುಸೂಚಿಯಲ್ಲಿ, ಅಂಕಣ (6)ರಲ್ಲಿ ಉಪ ಕಾರ್ಯದರ್ಶಿ ಹುದ್ದೆಯ ಪ್ರವರ್ಗದ ಸಂಬಂಧದಲ್ಲಿ ಕ್ರಮ ಸಂಖ್ಯೆ: 4ರಲ್ಲಿ ಅಗತ್ಯಪಡಿಸಲಾದ ವಿದ್ಯಾರ್ಹತೆ ಖಂಡದಡಿ, (ಎ) ಖಂಡದಲ್ಲಿನ "ಮುಂಬಡ್ತಿಗಾಗಿ" ಎಂಬ ಉಪ ಖಂಡದಡಿ, "ಕಾನೂನು ಪದವಿ" ಪದಗಳಿಗೆ ಬದಲಾಗಿ " ಪದವಿ" ಎಂಬ ಪದವನ್ನು ಸೇರಿಸತಕ್ಕದ್ದು.

ವಿಶೇಷ ಮಂಡಳಿಯ ಆದೇಶಾನುಸಾರ,
**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**KARNATAKA LEGISLATIVE COUNCIL SECRETARIAT**

**NOTIFICATION**

**No. KLCS/ADM-1/ 01/C&R/2010, Bangalore, dated: 10th March, 2010**

Whereas the draft of the Karnataka Legislative Council Secretariat (Recruitment and Conditions of Service) Rules, 2010 was published by the Special Board of Karnataka Legislative Council Secretariat proposes to make in exercise of the powers conferred by Sub-section (1) of Section 3 read with Section 8 of the Karnataka State Civil Services Act, 1978 (Karnataka Act No. 14 of 1990) published as required by clause was (a) of sub-section (2) of the said section in notification **No. KLCS/ADM-1/ 01/C&R/2010,** dated: 22.01.2010 in part IV-A of the Karnataka Gazette, Extraordinary dated: 23.01.2010 inviting

objection and suggestions from persons likely to be affected thereby within Fifteen days from the date of its publication in the Official Gazette;

Whereas the said Gazette was made available to the public on 23rd January, 2010;

Whereas the objections and suggestions received have been considered by the Special Board of the Karnataka Legislative Council.

Now, therefore, in exercise of the powers conferred by sub-section (1) of section 3 read with Section 8 of the Karnataka State Civil Services Act, 1978 (Karnataka Act No.14 of 1990) the Special Board of the Karnataka Legislative Council hereby makes the following rules.

**RULES**

**1. Title and Commencement: (1)** These rules may be called the Karnataka Legislative Council Secretariat (Recruitments and Conditions of service) (Fourth Amendment) Rules, 2010.

(2) They Shall come into force from the date of their publication in the Official Gazette.

**2. Amendment of Schedule- 1:-** In Schedule-1 to the Karnataka Legislative Council Secretariat **(**Recruitments and Conditions of service) Rules, 2003, in Sl.No-4 in respect of the category of post of **Deputy Secretary** in column (6) under the clause qualification required, sub-clause for the Promotion in clause (a), for the words **"degree in Law"** the words **"degree"** shall be substituted.

BY ORDER OF THE SPECIAL BOARD
**V. SHREESH**
Secretary
Karnataka Legislative Council

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಮಾರ್ಚ್ ೧೦, ೨೦೧೦ (ಫಾಲ್ಗುಣ ೧೯, ಶಕ ವರ್ಷ ೧೯೩೧) | ನಂ. ೨೩೯ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/43/Bill/2010, Bangalore, Dated : 10th March, 2010**

The following Bill was introduced in Legislative Assembly on 10th March, 2010.

**THE KARNATAKA STATE PUBLIC RECORDS BILL, 2010**

**(L.A. Bill No. 6 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಐದನೇ ಅಧಿವೇಶನ**

**ಕರ್ನಾಟಕ ರಾಜ್ಯ ಸಾರ್ವಜನಿಕ ದಾಖಲೆಗಳ ವಿಧೇಯಕ, 2010**
**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 6)**

ರಾಜ್ಯ ಸರ್ಕಾರದ, ರಾಜ್ಯ ಸಾರ್ವಜನಿಕ ವಲಯ ಉದ್ಯಮಗಳ, ಶಾಸನಬದ್ಧ ಸಂಸ್ಥೆಗಳ ಮತ್ತು ನಿಗಮಗಳ, ರಾಜ್ಯ ಸರ್ಕಾರವು ಸ್ಥಾಪಿಸಿದ ಆಯೋಗಗಳು ಮತ್ತು ಸಮಿತಿಗಳ ಸಾರ್ವಜನಿಕ ದಾಖಲೆಗಳ ನಿರ್ವಹಣೆ, ಆಡಳಿತ ಮತ್ತು ಸಂರಕ್ಷಣೆಯನ್ನು ನಿಯಂತ್ರಿಸುವುದಕ್ಕಾಗಿ ಹಾಗೂ ಅದಕ್ಕೆ ಸಂಬಂಧಪಟ್ಟ ಹಾಗೂ ಪ್ರಾಸಂಗಿಕ ವಿಷಯಗಳಿಗೆ ಉಪಬಂಧ ಕಲ್ಪಿಸುವ ಒಂದು ವಿಧೇಯಕ.

ಇದು, ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು :–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:–** (1) ಈ ಅಧಿನಿಯಮವನ್ನು **ಕರ್ನಾಟಕ ರಾಜ್ಯ ಸಾರ್ವಜನಿಕ ದಾಖಲೆಗಳ ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು, ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಮಂಡಳಿ" ಎಂದರೆ, 13ನೇ ಪ್ರಕರಣದ (1)ನೇ ಉಪ ಪ್ರಕರಣದಡಿಯಲ್ಲಿ ರಚಿಸಲಾದ ರಾಜ್ಯ ಪತ್ರಾಗಾರ ಸಲಹಾ ಮಂಡಳಿ ;

(ಬಿ) "ನಿರ್ದೇಶಕರು" ಎಂದರೆ, ರಾಜ್ಯ ಸರ್ಕಾರವು ನೇಮಿಸಿದ ಪತ್ರಾಗಾರ ನಿರ್ದೇಶಕರು ಮತ್ತು ಇದರಲ್ಲಿ ನಿರ್ದೇಶಕರ ಕರ್ತವ್ಯಗಳನ್ನು ನೆರವೇರಿಸಲು ಸರ್ಕಾರದಿಂದ ಅಧಿಕೃತರಾದ ಯಾವೊಬ್ಬ ಅಧಿಕಾರಿಯೂ ಒಳಗೊಳ್ಳುತ್ತಾರೆ ;

(ಸಿ) "ಪತ್ರಾಗಾರದ ಮುಖ್ಯಸ್ಥರು" ಎಂದರೆ, ರಾಜ್ಯ ಪತ್ರಾಗಾರಗಳ ಪ್ರಭಾರ ಹೊಂದಿರುವ ವ್ಯಕ್ತಿ;

(ಡಿ) ''ಸಾರ್ವಜನಿಕ ದಾಖಲೆಗಳು'' ಎಂಬುದು,–

(i) ಯಾವುದೇ ದಾಖಲೆ, ಹಸ್ತಪ್ರತಿ ಮತ್ತು ಕಡತ ;

(ii) ಒಂದು ದಾಖಲೆಯ ಯಾವುದೇ ಮೈಕ್ರೊ ಫಿಲ್ಮು, ಮೈಕ್ರೋಫೀಶ್ ಮತ್ತು ಪಡಿಯಚ್ಚು ಪ್ರತಿ ;

(iii) ಮೈಕ್ರೋಫಿಲ್ಮಿನಲ್ಲಿ ಒಳಗೊಂಡ ಬಿಂಬ ಅಥವಾ ಬಿಂಬಗಳನ್ನು ವಿಶಾಲಗೊಳಿಸಿ ಅಥವಾ ಹಾಗೆಯೇ ನಕಲು ತೆಗೆಯುವುದು ; ಮತ್ತು

(iv) ಯಾವುದೇ ದಾಖಲೆಗಳ ಸೃಜನಾ ಏಜೆನ್ಸಿಯ ಗಣಕಯಂತ್ರದಿಂದ ಅಥವಾ ಯಾವುದೇ ಇತರ ಸಾಧನದಿಂದ ಉತ್ಪಾದಿತವಾದ ಯಾವುದೇ ಇತರ ವಸ್ತು

– ಇವುಗಳನ್ನು ಒಳಗೊಳ್ಳುತ್ತದೆ.

(ಇ) "ದಾಖಲೆಗಳ ಸೃಜನಾ ಏಜೆನ್ಸಿ" ಎಂಬುದು ಈ ಮುಂದಿನವುಗಳನ್ನು ಒಳಗೊಳ್ಳುತ್ತದೆ,

(i) ರಾಜ್ಯ ಸರ್ಕಾರದ ಸಂಬಂಧದಲ್ಲಿ, ರಾಜ್ಯ ಸರ್ಕಾರದ ಯಾವುದೇ ಮಂತ್ರಾಲಯ, ಇಲಾಖೆ ಅಥವಾ ಕಛೇರಿ;

(ii) ರಾಜ್ಯ ಸರ್ಕಾರದ ಪೂರ್ಣ ಅಥವಾ ಗಣನೀಯ ನಿಯಂತ್ರಣದಲ್ಲಿರುವ ಅಥವಾ ಅದರಿಂದ ಹಣಕಾಸಿನ ನೆರವು ಪಡೆಯುವ ಯಾವುದೇ ಶಾಸನ ಬದ್ಧ ಸಂಸ್ಥೆ ಅಥವಾ ನಿಗಮದ ಸಂಬಂಧದಲ್ಲಿ ಅಥವಾ ರಾಜ್ಯ ಸರ್ಕಾರದಿಂದ ಸ್ಥಾಪಿತವಾದ ಯಾವುದೇ ಆಯೋಗ ಅಥವಾ ಯಾವುದೇ ಸಮಿತಿಯ ಸಂದರ್ಭದಲ್ಲಿ, ಸದರಿ ಸಂಸ್ಥೆಯ, ನಿಗಮದ, ಆಯೋಗದ ಅಥವಾ ಸಮಿತಿಯ ಕಚೇರಿಗಳು.

(ಎಫ್) "ದಾಖಲೆಗಳ ಅಧಿಕಾರಿ" ಎಂದರೆ, 5ನೇ ಪ್ರಕರಣದ (1) ಉಪ–ಪ್ರಕರಣದ ಅಡಿಯಲ್ಲಿ ದಾಖಲೆಗಳ ಸೃಜನಾ ಏಜೆನ್ಸಿಯಿಂದ ನಾಮನಿರ್ದೇಶನ ಮಾಡಿದ ಅಧಿಕಾರಿ ;

(ಜಿ) "ರಾಜ್ಯ" ಎಂದರೆ, ಕರ್ನಾಟಕ ರಾಜ್ಯ.

**3. ಸಾರ್ವಜನಿಕ ದಾಖಲೆಗಳ ಆಡಳಿತ, ನಿರ್ವಹಣೆಗೆ ಮುಂತಾದವುಗಳಿಗೆ ಸಂಬಂಧಿಸಿದ ಕಾರ್ಯಾಚರಣೆಗಳ ಸಮನ್ವಯ, ನಿಯಂತ್ರಣ ಮತ್ತು ಮೇಲ್ವಿಚಾರಣೆ ಮಾಡಲು ರಾಜ್ಯ ಸರ್ಕಾರದ ಅಧಿಕಾರ.**– (1) ಈ ಅಧಿನಿಯಮದ ಅಡಿಯಲ್ಲಿನ ಸಾರ್ವಜನಿಕ ದಾಖಲೆಗಳಿಗೆ ಸಂಬಂಧಿಸಿದ ಆಡಳಿತ, ನಿರ್ವಹಣೆ, ಸಂರಕ್ಷಣೆ, ಆಯ್ಕೆ, ವಿಲೆ ಮತ್ತು ನಾಶಪಡಿಸುವಿಕೆಗೆ ಸಂಬಂಧಿಸಿದ ಕಾರ್ಯಾಚರಣೆಗಳ ಸಮನ್ವಯ, ನಿಯಂತ್ರಣ ಮತ್ತು ಮೇಲ್ವಿಚಾರಣೆಯ ಅಧಿಕಾರವನ್ನು ರಾಜ್ಯ ಸರ್ಕಾರವು ಹೊಂದಿರತಕ್ಕದ್ದು.

(2) ದಾಖಲೆಗಳ ಸೃಜನಾ ಏಜೆನ್ಸಿಗಳ ಸಾರ್ವಜನಿಕ ದಾಖಲೆಗಳ ಸಂಬಂಧದಲ್ಲಿ, ರಾಜ್ಯ ಸರ್ಕಾರವು, ಆದೇಶದ ಮೂಲಕ, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳ ಮೇಲೆ ಪತ್ರಾಗಾರದ ನಿರ್ದೇಶಕರಿಗೆ ಈ ಕೆಳಗಿನ ಎಲ್ಲಾ ಅಥವಾ ಯಾವುವಾದರೂ ಪ್ರಕಾರ್ಯಗಳನ್ನು ನಿರ್ವಹಿಸಲು ಅಧಿಕಾರ ನೀಡಬಹುದು, ಎಂದರೆ :–

(ಎ) ಪತ್ರಾಗಾರಗಳ ಮೇಲ್ವಿಚಾರಣೆ, ನಿರ್ವಹಣೆ ಮತ್ತು ನಿಯಂತ್ರಣ ;

(ಬಿ) ನಿಯಮಿಸಬಹುದಾದಂಥ ಅವಧಿಯ ತರುವಾಯ ಶಾಶ್ವತ ಸ್ವರೂಪದ ಸಾರ್ವಜನಿಕ ದಾಖಲೆಗಳನ್ನು ತನ್ನಲ್ಲಿ ಇಟ್ಟುಕೊಳ್ಳಲು ಒಪ್ಪಿಕೊಳ್ಳುವುದು ;

(ಸಿ) ಸಾರ್ವಜನಿಕ ದಾಖಲೆಗಳ ಅಭಿರಕ್ಷೆ, ಬಳಕೆ ಮತ್ತು ಹಿಂದಕ್ಕೆ ಪಡೆಯುವುದು;

(ಡಿ) ಸಾರ್ವಜನಿಕ ದಾಖಲೆಗಳನ್ನು ಜೋಡಿಸಿಡುವುದು, ಸಂರಕ್ಷಣೆ ಮತ್ತು ಪ್ರದರ್ಶನ;

(ಇ) ಸಾರ್ವಜನಿಕ ದಾಖಲೆಗಳ ವಿವರಣಾ ಪಟ್ಟಿಗಳು, ಸೂಚಿಗಳು (ಇಂಡಿಸಿಸ್), ವಿಷಯಪಟ್ಟಿಗಳು (ಕ್ಯಾಟಲಾಗುಗಳು) ಮತ್ತು ಇತರ ಪರಾಮರ್ಶನಾ ಮಾಧ್ಯಮಗಳನ್ನು ತಯಾರಿಸುವುದು ;

(ಎಫ್) ದಾಖಲೆಗಳ ನಿರ್ವಹಣಾ ಪದ್ಧತಿಯ ಸುಧಾರಣೆಗಾಗಿ ಗುಣಮಟ್ಟಗಳು, ಪ್ರಕ್ರಿಯೆಗಳು ಮತ್ತು ತಂತ್ರಜ್ಞಾನಗಳನ್ನು ವಿಶ್ಲೇಷಿಸುವುದು, ಅಭಿವೃದ್ಧಿ ಪಡಿಸುವುದು, ಪ್ರೋತ್ಸಾಹಿಸುವುದು ಮತ್ತು ಸಮನ್ವಯಗೊಳಿಸುವುದು ;

(ಜಿ) ಪತ್ರಾಗಾರದಲ್ಲಿ ಮತ್ತು ದಾಖಲೆಗಳ ಸೃಜನಾ ಏಜೆನ್ಸಿಯಲ್ಲಿ ಸಾರ್ವಜನಿಕ ದಾಖಲೆಗಳನ್ನು ಸರಿಯಾಗಿ ನಿರ್ವಹಿಸುವಂತೆ, ಜೋಡಿಸುವಂತೆ ಮತ್ತು ಸುರಕ್ಷವಾಗಿಡುವಂತೆ ನೋಡಿಕೊಳ್ಳುವುದು ;

(ಎಚ್) ಸಾರ್ವಜನಿಕ ದಾಖಲೆಗಳ ಸಂರಕ್ಷಣೆಗಾಗಿ ಲಭ್ಯವಿರುವ ಸ್ಥಳಾವಕಾಶವನ್ನು ಉಪಯೋಗಿಸುವಂತೆ ಮತ್ತು ಸಾಧನಗಳನ್ನು ಚೆನ್ನಾಗಿ ಇಟ್ಟುಕೊಂಡು ಬರುವಂತೆ ಉತ್ತೇಜಿಸುವುದು ;

(ಐ) ದಾಖಲೆಗಳ ಸಂಕಲನ, ವರ್ಗೀಕರಣ ಮತ್ತು ವಿಲೆಯ ಬಗ್ಗೆ ಮತ್ತು ದಾಖಲೆಗಳ ನಿರ್ವಹಣೆಯ ಗುಣಮಟ್ಟಗಳು, ಪ್ರಕ್ರಿಯೆಗಳು ಮತ್ತು ತಂತ್ರಜ್ಞಾನಗಳನ್ನು ಅನ್ವಯಿಸುವುದರ ಬಗ್ಗೆ ದಾಖಲೆಗಳ ಸೃಜನಾ ಏಜೆನ್ಸಿಗಳಿಗೆ ಸಲಹೆಯನ್ನು ನೀಡುವುದು;

(ಜೆ) ಸಾರ್ವಜನಿಕ ದಾಖಲೆಗಳ ಸಮೀಕ್ಷೆ ಮತ್ತು ಪರಿವೀಕ್ಷಣೆಗಳನ್ನು ಮಾಡುವುದು ;

(ಕೆ) ಪತ್ರಾಗಾರ ಆಡಳಿತ ಮತ್ತು ದಾಖಲೆಗಳ ನಿರ್ವಹಣೆಯ ವಿವಿಧ ವಿದ್ಯಾವಿಭಾಗಗಳಲ್ಲಿ ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸುವುದು ;

(ಎಲ್) ಯಾವುದೇ ಖಾಸಗಿ ಮೂಲದಿಂದ ದಾಖಲೆಗಳನ್ನು ಸ್ವೀಕರಿಸುವುದು ;

(ಎಂ) ಸಾರ್ವಜನಿಕ ದಾಖಲೆಗಳನ್ನು ನೋಡುವ ಅವಕಾಶವನ್ನು ನಿಯಂತ್ರಿಸುವುದು ;

(ಎನ್) ನಿಷ್ಕ್ರಿಯ ಸಂಸ್ಥೆಗಳ ದಾಖಲೆಗಳನ್ನು ಸ್ವೀಕರಿಸುವುದು ಮತ್ತು ರಾಷ್ಟ್ರೀಯ / ರಾಜ್ಯ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಸಾರ್ವಜನಿಕ ದಾಖಲೆಗಳನ್ನು ಪಡೆದುಕೊಳ್ಳುವುದಕ್ಕಾಗಿ ವ್ಯವಸ್ಥೆ ಮಾಡುವುದು ;

(ಓ) ದಾಖಲೆಗಳ ಅಧಿಕಾರಿಯಿಂದ ದಾಖಲೆಗಳ ನಿರ್ವಹಣೆ ಮತ್ತು ವಿಲೆ ಪದ್ಧತಿಗಳ ಬಗ್ಗೆ ವರದಿಗಳನ್ನು ಸ್ವೀಕರಿಸುವುದು ;

(ಪಿ) ಸಾರ್ವಜನಿಕ ದಾಖಲೆಗಳ ಅಧಿಪ್ರಮಾಣಿತ ಪ್ರತಿಗಳು ಅಥವಾ ಅವುಗಳ ಉದ್ಧೃತ ಭಾಗಗಳನ್ನು ನೀಡುವುದು ;

(ಕ್ಯೂ) ಸಾರ್ವಜನಿಕ ದಾಖಲೆಗಳನ್ನು ನಾಶಪಡಿಸುವುದು ಅಥವಾ ವಿಲೆ ಮಾಡುವುದು ;

(ಆರ್) ಚಾರಿತ್ರಿಕ, ರಾಜ್ಯ ಅಥವಾ ರಾಷ್ಟ್ರೀಯ ಮಹತ್ವದ ಯಾವುದೇ ದಸ್ತಾವೇಜನ್ನು ಬಾಡಿಗೆಯ ಮೇಲೆ ಅಥವಾ ಖರೀದಿಸಿ ಪಡೆಯುವುದು ಅಥವಾ ಕೊಡುಗೆಯಾಗಿ ಸ್ವೀಕರಿಸುವುದು.

4. **ಸಾರ್ವಜನಿಕ ದಾಖಲೆಗಳನ್ನು ರಾಜ್ಯದಿಂದ ಹೊರಕ್ಕೆ ತೆಗೆದುಕೊಂಡು ಹೋಗದಂತೆ ನಿಷೇಧಿಸುವುದು.–** ಯಾವ ವ್ಯಕ್ತಿಯೂ ರಾಜ್ಯ ಸರ್ಕಾರದ ಪೂರ್ವಾನುಮೋದನೆಯಿಲ್ಲದೆ ಯಾವುವೇ ಸಾರ್ವಜನಿಕ ದಾಖಲೆಗಳನ್ನು ರಾಜ್ಯದಿಂದ ಹೊರಕ್ಕೆ ತೆಗೆದುಕೊಂಡು ಹೋಗತಕ್ಕದ್ದಲ್ಲ ಅಥವಾ ತೆಗೆದುಕೊಂಡು ಹೋಗುವಂತೆ ಮಾಡತಕ್ಕದ್ದಲ್ಲ.

5. **ದಾಖಲೆಗಳ ಅಧಿಕಾರಿ.–** (1) ಪ್ರತಿಯೊಂದು ದಾಖಲೆಗಳ ಸೃಜನಾ ಏಜೆನ್ಸಿಯು ಈ ಅಧಿನಿಯಮದಡಿಯಲ್ಲಿನ ಕರ್ತವ್ಯಗಳನ್ನು ನಿರ್ವಹಿಸಿಕೊಂಡುಹೋಗಲು ಒಬ್ಬ ಅಧಿಕಾರಿಯನ್ನು ದಾಖಲೆಗಳ ಅಧಿಕಾರಿ ಎಂದು ನಾಮನಿರ್ದೇಶನ ಮಾಡತಕ್ಕದ್ದು.

(2) ಪ್ರತಿಯೊಂದು ದಾಖಲೆಗಳ ಸೃಜನಾ ಏಜೆನ್ಸಿಯು ತಾನು ಸೂಕ್ತವೆಂದು ಭಾವಿಸಿದಂಥ ಸ್ಥಳಗಳಲ್ಲಿ ಅಂಥ ಸಂಖ್ಯೆಯ ದಾಖಲೆ ಕೊಠಡಿಗಳನ್ನು ನಿರ್ಮಿಸತಕ್ಕದ್ದು ಹಾಗೂ ಪ್ರತಿಯೊಂದು ದಾಖಲೆ ಕೊಠಡಿಯನ್ನು ಒಬ್ಬ ದಾಖಲೆಗಳ ಅಧಿಕಾರಿಯ ಪ್ರಭಾರದಡಿಯಲ್ಲಿ ಇಡತಕ್ಕದ್ದು.

6. **ದಾಖಲೆಗಳ ಅಧಿಕಾರಿಯ ಜವಾಬ್ದಾರಿಗಳು.–** (1) ದಾಖಲೆಗಳ ಅಧಿಕಾರಿಯು ಈ ಕೆಳಗಿನವುಗಳಿಗೆ ಜವಾಬ್ದಾರನಾಗಿರತಕ್ಕದ್ದು.

(ಎ) ತನ್ನ ಪ್ರಭಾರದಲ್ಲಿರುವ ಸಾರ್ವಜನಿಕ ದಾಖಲೆಗಳನ್ನು ಓರಣವಾಗಿ ಜೋಡಿಸಿಡುವುದು, ನಿರ್ವಹಿಸಿಕೊಂಡು ಬರುವುದು ಮತ್ತು ಸಂರಕ್ಷಣೆ ಮಾಡುವುದು ;

(ಬಿ) ಎಲ್ಲಾ ಸಾರ್ವಜನಿಕ ದಾಖಲೆಗಳ ನಿಯತಕಾಲಿಕ ಪುನರೀಕ್ಷಣೆ ಮಾಡುವುದು ಮತ್ತು ಅಲ್ಪಕಾಲಿಕ ಮೌಲ್ಯದ ಸಾರ್ವಜನಿಕ ದಾಖಲೆಗಳನ್ನು ನಾಶಗೊಳಿಸುವುದು;

(ಸಿ) ಶಾಶ್ವತ ಮೌಲ್ಯದ ಸಾರ್ವಜನಿಕ ದಾಖಲೆಗಳನ್ನು ಉಳಿಸಿಕೊಳ್ಳುವ ದೃಷ್ಟಿಯಿಂದ ರಾಜ್ಯ ಪತ್ರಾಗಾರದೊಡನೆ ಸಮಾಲೋಚಿಸಿ ಇಪ್ಪತ್ತೈದು ವರ್ಷಗಳಿಗಿಂತ ಹಳೆಯದಾದ ದಾಖಲೆಗಳ ಮೌಲ್ಯ ನಿರ್ಣಯ ಮಾಡುವುದು ;

(ಡಿ) 8ನೇ ಪ್ರಕರಣದ (1)ನೇ ಉಪಪ್ರಕರಣದಡಿಯಲ್ಲಿ ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು ಸಾರ್ವಜನಿಕ ದಾಖಲೆಗಳನ್ನು ನಾಶಪಡಿಸುವುದು ;

(ಇ) ರಾಜ್ಯ ಪತ್ರಾಗಾರದೊಡನೆ ಸಮಾಲೋಚಿಸಿ ಉಳಿಸಿಕೊಂಡಿರುವ ಸಾರ್ವಜನಿಕ ದಾಖಲೆಗಳಿಗೆ ಅನುಸೂಚಿಯನ್ನು ಸಂಕಲನ ಮಾಡುವುದು ;

(ಎಫ್) ನಿಯಮಿಸಬಹುದಾದಂಥ ರೀತಿಯಲ್ಲಿ ವರ್ಗೀಕರಣವಾದ ಸಾರ್ವಜನಿಕ ದಾಖಲೆಗಳನ್ನು ಕೆಳದರ್ಜೆಗೆ ಇಳಿಸುವುದಕ್ಕಾಗಿ ನಿಯತಕಾಲಿಕ ಪುನರೀಕ್ಷಣೆ ಮಾಡುವುದು ;

(ಜಿ) ದಾಖಲೆ ನಿರ್ವಹಣಾ ಪದ್ಧತಿಯ ಸುಧಾರಣೆಗಾಗಿ ಮತ್ತು ಸಾರ್ವಜನಿಕ ದಾಖಲೆಗಳ ಭದ್ರತೆಗಾಗಿ ರಾಜ್ಯಪತ್ರಾಗಾರದವರು ಕಾಲಕಾಲಕ್ಕೆ ಶಿಫಾರಸ್ಸು ಮಾಡಬಹುದಾದಂಥ ಗುಣಮಟ್ಟಗಳು, ಪ್ರಕ್ರಿಯೆಗಳು ಮತ್ತು ತಂತ್ರಜ್ಞಾನಗಳನ್ನು ಅಳವಡಿಸಿಕೊಳ್ಳುವುದು ;

(ಎಚ್) ಸಾರ್ವಜನಿಕ ದಾಖಲೆಗಳ ವಾರ್ಷಿಕ ವಿಷಯಸೂಚಿಗಳ ಸಂಕಲನ ಮಾಡುವುದು ;

(ಐ) ಸಂಘಟನಾ ಚರಿತ್ರೆ ಮತ್ತು ಅದರ ವಾರ್ಷಿಕ ಪುರವಣಿಯ ಸಂಕಲನ ಮಾಡುವುದು ;

(ಜೆ) ಸಾರ್ವಜನಿಕ ದಾಖಲೆಗಳ ನಿರ್ವಹಣೆಯಲ್ಲಿ ರಾಜ್ಯ ಪತ್ರಾಗಾರಕ್ಕೆ ನೆರವು ನೀಡುವುದು;

(ಕೆ) ನಿಯಮಿಸಬಹುದಾದಂಥ ರೀತಿಯಲ್ಲಿ ನಿರ್ದೇಶಕರಿಗೆ ವಾರ್ಷಿಕ ವರದಿಗಳನ್ನು ಸಲ್ಲಿಸುವುದು;

(ಎಲ್) ಯಾವುದೇ ನಿಷ್ಕ್ರಿಯ ಸಂಸ್ಥೆಯ ದಾಖಲೆಗಳನ್ನು ಸಂರಕ್ಷಣೆಗಾಗಿ ರಾಜ್ಯ ಪತ್ರಾಗಾರಕ್ಕೆ ವರ್ಗಾವಣೆ ಮಾಡುವುದು ;

(2) (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟ ಪಡಿಸಿದ ಜವಾಬ್ದಾರಿಗಳನ್ನು ನಿರ್ವಹಿಸುವಲ್ಲಿ ದಾಖಲೆಗಳ ಅಧಿಕಾರಿಯು ನಿರ್ದೇಶಕರ ನಿರ್ದೇಶನದಡಿಯಲ್ಲಿ ಕರ್ತವ್ಯನಿರ್ವಹಿಸತಕ್ಕದ್ದು.

7. **ದಾಖಲೆಗಳ ಅಧಿಕಾರಿಯು ತನ್ನ ಅಭಿರಕ್ಷೆಯಲ್ಲಿರುವ ಸಾರ್ವಜನಿಕ ದಾಖಲೆಗಳನ್ನು ಅನಧಿಕೃತವಾಗಿ ತೆಗೆದುಕೊಂಡು ಹೋದ, ನಾಶಪಡಿಸಿದ ಮುಂತಾದ ಸಂದರ್ಭದಲ್ಲಿ ಸೂಕ್ತ ಕ್ರಮ ಕೈಗೊಳ್ಳಬೇಕು.– (1)** ದಾಖಲೆಗಳ ಅಧಿಕಾರಿಯು, ತನ್ನ ಪ್ರಭಾರದಲ್ಲಿರುವ ಯಾವುದೇ ಸಾರ್ವಜನಿಕ ದಾಖಲೆಗಳನ್ನು ಅನಧಿಕೃತವಾಗಿ ತೆಗೆದುಕೊಂಡುಹೋದಾಗ, ನಾಶಪಡಿಸಿದಾಗ, ವಿರೂಪಗೊಳಿಸಿದಾಗ ಅಥವಾ ಮಾರ್ಪಡಿಸಿದಾಗ ಅಂಥ ಸಾರ್ವಜನಿಕ ದಾಖಲೆಗಳನ್ನು ಮತ್ತೆ ಪಡೆದುಕೊಳ್ಳುವುದಕ್ಕೆ ಅಥವಾ ಅದನ್ನು ಪೂರ್ವಸ್ಥಿತಿಗೆ ತರುವುದಕ್ಕೆ ಸೂಕ್ತವಾದ ಕ್ರಮವನ್ನು ಕೂಡಲೇ ತೆಗೆದುಕೊಳ್ಳತಕ್ಕದ್ದು.

(2) ದಾಖಲೆಗಳ ಅಧಿಕಾರಿಯು, ತನ್ನ ಪ್ರಭಾರದಲ್ಲಿರುವ ಯಾವುದೇ ಸಾರ್ವಜನಿಕ ದಾಖಲೆಗಳನ್ನು ಅನಧಿಕೃತವಾಗಿ ತೆಗೆದುಕೊಂಡುಹೋದ, ನಾಶಪಡಿಸಿದ, ವಿರೂಪಗೊಳಿಸಿದ ಅಥವಾ ವ್ಯತ್ಯಾಸಮಾಡಿದ ಬಗ್ಗೆ ಯಾವುದೇ ಮಾಹಿತಿಯನ್ನು ಮತ್ತು ತಾನು ಪ್ರಾರಂಭಿಸಿರುವ ಕ್ರಮದ ಬಗ್ಗೆ ಯಾವುದೇ ವಿಳಂಬವಿಲ್ಲದೆ ಒಂದು ಲಿಖಿತ ವರದಿಯನ್ನು ನಿರ್ದೇಶಕರಿಗೆ ಸಲ್ಲಿಸತಕ್ಕದ್ದು ಮತ್ತು ನಿರ್ದೇಶಕರು ಯಾವುದಾದರೂ ನಿರ್ದೇಶನಗಳನ್ನು ನೀಡಿದ್ದರೆ, ಅವುಗಳಿಗೊಳಪಟ್ಟು ತಾನು ಅವಶ್ಯವೆಂದು ಭಾವಿಸಬಹುದಾದ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು.

(3) ದಾಖಲೆಗಳ ಅಧಿಕಾರಿಯು, ಸಾರ್ವಜನಿಕ ದಾಖಲೆಗಳನ್ನು ಮತ್ತೆ ಪಡೆಯುವ ಅಥವಾ ಅದನ್ನು ಪೂರ್ವಸ್ಥಿತಿಗೆ ತರುವ ಉದ್ದೇಶಕ್ಕಾಗಿ ಯಾವೊಬ್ಬ ಸರ್ಕಾರಿ ಅಧಿಕಾರಿಯ ಅಥವಾ ಇತರ ಯಾವುದೇ ವ್ಯಕ್ತಿಯ ನೆರವನ್ನು ಕೋರಬಹುದು ಮತ್ತು ಅಂಥ ಅಧಿಕಾರಿ ಅಥವಾ ವ್ಯಕ್ತಿಯು ದಾಖಲೆಗಳ ಅಧಿಕಾರಿಗೆ ಎಲ್ಲಾ ನೆರವನ್ನು ನೀಡತಕ್ಕದ್ದು.

8. **ಸಾರ್ವಜನಿಕ ದಾಖಲೆಗಳನ್ನು ನಾಶಪಡಿಸುವುದು ಅಥವಾ ವಿಲೆಮಾಡುವುದು.–** (1) ನಿಯಮಿಸಬಹುದಾದಂಥ ಷರತ್ತುಗಳಿಗೊಳಪಟ್ಟು ಮತ್ತು ಅಂಥ ರೀತಿಯಲ್ಲಿ ಹೊರತು ಯಾವುದೇ ಸಾರ್ವಜನಿಕ ದಾಖಲೆಯನ್ನು ನಾಶಪಡಿಸತಕ್ಕದ್ದಲ್ಲ ಅಥವಾ ಅನ್ಯಥಾ ವಿಲೆ ಮಾಡತಕ್ಕದ್ದಲ್ಲ.

(2) ನೂರುವರ್ಷಗಳಿಗಿಂತ ಹಳೆಯದಾಗಿರುವ ಯಾವುವೇ ದಾಖಲೆಗಳನ್ನು, ಅವು ಪತ್ರಾಗಾರದ ಯಾವುದೇ ಬಳಕೆಗೆ ಉಪಯೋಗಿಸಿಕೊಳ್ಳಲಾಗದ ಹಾಗೆ ವಿರೂಪಗೊಂಡಿವೆ ಅಥವಾ ದುಸ್ಥಿತಿಯಲ್ಲಿವೆ ಎಂದು ನಿರ್ದೇಶಕರ ಅಭಿಪ್ರಾಯಪಟ್ಟ ಹೊರತು ನಾಶಪಡಿಸತಕ್ಕದ್ದಲ್ಲ.

**9. ಉಲ್ಲಂಘನೆಗೆ ದಂಡನೆ.–** 4ನೇ ಪ್ರಕರಣದ ಅಥವಾ 8ನೇ ಪ್ರಕರಣದ ಯಾವುವೆ ಉಪಬಂಧಗಳನ್ನು ಯಾರೇ ಉಲ್ಲಂಘಿಸಿದರೂ, ಅವರು ಐದು ವರ್ಷಗಳ ಅವಧಿವರೆಗಿನ ಕಾರಾವಾಸದಿಂದ ಅಥವಾ ಹತ್ತುಸಾವಿರ ರೂಪಾಯಿಗಳವರೆಗಿನ ದಂಡದಿಂದ ಅಥವಾ ಇವೆರಡರಿಂದಲೂ ದಂಡಿತರಾಗತಕ್ಕದ್ದು.

10. **ಭದ್ರತೆಯ ವರ್ಗೀಕರಣವನ್ನು ಹೊಂದಿರುವ ಸಾರ್ವಜನಿಕ ದಾಖಲೆಗಳು.–** ಭದ್ರತೆಯ ವರ್ಗೀಕರಣವನ್ನು ಹೊಂದಿರುವ ಯಾವುವೇ ಸಾರ್ವಜನಿಕ ದಾಖಲೆಗಳನ್ನು ರಾಜ್ಯ ಪತ್ರಾಗಾರಕ್ಕೆ ವರ್ಗಾಯಿಸತಕ್ಕದ್ದಲ್ಲ.

11. **ಖಾಸಗಿ ಮೂಲಗಳಿಂದ ದಾಖಲೆಗಳ ಸ್ವೀಕೃತಿ.–** (1) ರಾಜ್ಯಪತ್ರಾಗಾರವು, ಚಾರಿತ್ರಿಕ ಅಥವಾ ರಾಷ್ಟ್ರೀಯ ಪ್ರಾಮುಖ್ಯತೆಯ ಯಾವುದೇ ದಾಖಲೆಯನ್ನು ಯಾವುದೇ ಖಾಸಗಿ ಮೂಲದಿಂದ ದಾನವಾಗಿ, ಖರೀದಿ ಮಾಡಿ ಅಥವಾ ಅನ್ಯಥಾ ಸ್ವೀಕರಿಸಬಹುದು.

(2) ರಾಜ್ಯ ಪತ್ರಾಗಾರವು, ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು (1)ನೇ ಉಪಪ್ರಕರಣದಲ್ಲಿ ಉಲ್ಲೇಖವಾದ ಯಾವುದೇ ದಾಖಲೆಯನ್ನು ಯಾವೊಬ್ಬ ನೈಜ ಸಂಶೋಧನಾ ವಿದ್ವಾಂಸರಿಗೆ ಲಭ್ಯವಾಗುವಂತೆ ಮಾಡಬಹುದು.

12. **ಸಾರ್ವಜನಿಕ ದಾಖಲೆಗಳನ್ನು ನೋಡುವ ಅವಕಾಶ.–** (1) ಮೂವತ್ತು ವರ್ಷಗಳಿಗಿಂತ ಹಳೆಯದಾದ ವರ್ಗೀಕೃತವಾಗಿಲ್ಲದ ಮತ್ತು ರಾಜ್ಯ ಪತ್ರಾಗಾರಕ್ಕೆ ವರ್ಗಾವಣೆಯಾಗಿರುವ ಎಲ್ಲಾ ಸಾರ್ವಜನಿಕ ದಾಖಲೆಗಳನ್ನು ನಿಯಮಿಸಬಹುದಾದಂಥ ವಿನಾಯಿತಿಗಳು ಮತ್ತು ನಿರ್ಬಂಧಗಳಿಗೊಳಪಟ್ಟು ಯಾವೊಬ್ಬ ನೈಜ ಸಂಶೋಧನಾ ವಿದ್ವಾಂಸರಿಗೆ ಲಭ್ಯವಾಗುವಂತೆ ಮಾಡಬಹುದು.

**ವಿವರಣೆ :–** ಈ ಉಪಪ್ರಕರಣದ ಉದ್ದೇಶಗಳಿಗಾಗಿ, ಮೂವತ್ತು ವರ್ಷಗಳ ಅವಧಿಯನ್ನು ಸದರಿ ಸಾರ್ವಜನಿಕ ದಾಖಲೆಯನ್ನು ತೆರೆದ ವರ್ಷದಿಂದ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

(2) ಯಾವುದೇ ದಾಖಲೆಗಳ ಸೃಜನಾ ಏಜೆನ್ಸಿಯು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು ಯಾವುದೇ ವ್ಯಕ್ತಿಯು ತನ್ನ ಅಭಿರಕ್ಷೆಯಲ್ಲಿರುವ ಯಾವುದೇ ಸಾರ್ವಜನಿಕ ದಾಖಲೆಯನ್ನು ನೋಡಲು ಅನುಮತಿಯನ್ನು ನೀಡಬಹುದು.

13. **ಪತ್ರಾಗಾರ ಸಲಹಾ ಮಂಡಳಿ.–** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉದ್ದೇಶಗಳಿಗಾಗಿ ಒಂದು ಪತ್ರಾಗಾರ ಸಲಹಾ ಮಂಡಳಿಯನ್ನು ಸ್ಥಾಪಿಸಬಹುದು.

(2) ಮಂಡಳಿಯು ಈ ಮುಂದಿನ ಸದಸ್ಯರುಗಳನ್ನೊಳಗೊಂಡಿರತಕ್ಕದ್ದು, ಎಂದರೆ :–

| | | |
|---|---|---|
| (ಎ) | ಸಂಸ್ಕೃತಿ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿಗಳು | ಅಧ್ಯಕ್ಷರು, ಪದನಿಮಿತ್ತ ; |
| (ಬಿ) | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ<br>ಆರ್ಥಿಕ ಇಲಾಖೆ, ಕಾನೂನು ಇಲಾಖೆ,<br>ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ – ಈ ಪ್ರತಿಯೊಂದು ಇಲಾಖೆಗಳಿಂದ ಕರ್ನಾಟಕ ಸರ್ಕಾರದ ಜಂಟಿ ಕಾರ್ಯದರ್ಶಿಗಳ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಒಬ್ಬೊಬ್ಬ ಅಧಿಕಾರಿಗಳು | ಸದಸ್ಯರು, ಪದನಿಮಿತ್ತ ; |
| (ಸಿ) | ರಾಜ್ಯ ಸರ್ಕಾರವು ಮೂರು ವರ್ಷಗಳಿಗೆ ಮೀರದ ಅವಧಿಗಾಗಿ ನಾಮನಿರ್ದೇಶನ ಮಾಡಿದ ಮೂವರು ವ್ಯಕ್ತಿಗಳು, ಅವರುಗಳಲ್ಲಿ ಒಬ್ಬರು ವೃತ್ತಿಯಿಂದ ಪತ್ರಪಾಲಕರಾಗಿರತಕ್ಕದ್ದು, ರಾಜ್ಯದ ಮಾನ್ಯತೆ ಪಡೆದ ಯಾವುವೇ ವಿಶ್ವವಿದ್ಯಾಲಯಗಳಲ್ಲಿ ಸ್ನಾತಕೋತ್ತರ ಚರಿತ್ರೆ ವಿಭಾಗದ ಪ್ರಾಧ್ಯಾಪಕರಾಗಿರುವ ಇಬ್ಬರು | ಸದಸ್ಯರುಗಳು |
| (ಡಿ) | ಪತ್ರಾಗಾರದ ನಿರ್ದೇಶಕರು | ಸದಸ್ಯ–ಕಾರ್ಯದರ್ಶಿಗಳು, ಪದನಿಮಿತ್ತ |

(3) (2)ನೇ ಉಪಪ್ರಕರಣದ (ಸಿ) ಖಂಡದಡಿಯಲ್ಲಿ ನಾಮನಿರ್ದೇಶಿತರಾದ ಸದಸ್ಯರುಗಳಿಗೆ ನಿಯಮಿಸಬಹುದದಾಂಥ ಭತ್ಯೆಗಳನ್ನು ಸಂದಾಯ ಮಾಡತಕ್ಕದ್ದು.

14. **ಮಂಡಳಿಯ ಪ್ರಕಾರ್ಯಗಳು.–** ಮಂಡಳಿಯು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ :–

(ಎ) ಸಾರ್ವಜನಿಕ ದಾಖಲೆಗಳ ಆಡಳಿತ, ನಿರ್ವಹಣೆ, ಸಂರಕ್ಷಣೆ ಮತ್ತು ಬಳಕೆಗೆ ಸಂಬಂಧಿಸಿದ ವಿಷಯಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಸಲಹೆ ನೀಡುವುದು ;

(ಬಿ) ಪತ್ರಪಾಲಕರ ತರಬೇತಿಗಾಗಿ ಮಾರ್ಗದರ್ಶನಗಳನ್ನು ರಚಿಸುವುದು ;

(ಸಿ) ಖಾಸಗಿಯವರ ಅಭಿರಕ್ಷೆಯಲ್ಲಿರುವ ದಾಖಲೆಗಳನ್ನು ಅವರಿಂದ ಪಡೆದುಕೊಳ್ಳುವ ಬಗ್ಗೆ ನಿರ್ದೇಶನಗಳನ್ನು ನೀಡುವುದು ;

(ಡಿ) ನಿಯಮಿಸಬಹುದಾದಂಥ ಇತರ ವಿಷಯಗಳ ಬಗ್ಗೆ ವ್ಯವಹರಿಸುವುದು.

15. **ಪತ್ರಪಾಲನಾ ವಿಜ್ಞಾನದಲ್ಲಿ ವ್ಯಾಸಂಗ ಕ್ರಮಗಳಿಗಾಗಿ ಪ್ರಮಾಣಕಗಳು ಮತ್ತು ಮಾನಕಮಟ್ಟಗಳನ್ನು ರಚಿಸಲು ನಿರ್ದೇಶಕರ ಅಧಿಕಾರ.–** ಪತ್ರಪಾಲನಾ ವಿಜ್ಞಾನ ಮತ್ತು ಇತರ ಪೂರಕ ವಿಷಯಗಳಲ್ಲಿ ತರಬೇತಿಗೆ ಸಂಬಂಧಿತ ವ್ಯಾಸಂಗಕ್ರಮಗಳು, ಪಠ್ಯವಿಷಯಗಳು, ಮೌಲ್ಯಮಾಪನ ಮತ್ತು ಪರೀಕ್ಷೆಗಳಿಗಾಗಿ ಪ್ರಮಾಣಕಗಳು ಮತ್ತು ಮಾನಕ ಗುಣಮಟ್ಟಗಳನ್ನು ರಚಿಸುವ ಅಧಿಕಾರವನ್ನು ನಿರ್ದೇಶಕರು ಹೊಂದಿರತಕ್ಕದ್ದು.

16. **ಸದ್ಭಾವನೆಯಿಂದ ಕೈಗೊಂಡ ಕ್ರಮಕ್ಕೆ ರಕ್ಷಣೆ.–** ಈ ಅಧಿನಿಯಮದ, ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಪಾಲನೆಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕ್ರಮಕ್ಕಾಗಿ ಯಾವೊಬ್ಬ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

17. **ನಿಯಮಗಳನ್ನು ರಚಿಸುವ ಅಧಿಕಾರ.–** (1) ರಾಜ್ಯ ಸರ್ಕಾರವು ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸಲು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು ಈ ಮುಂದಿನ ಎಲ್ಲಾ ಅಥವಾ ಯಾವುವಾದರೂ ವಿಷಯಗಳಿಗೆ ಉಪಬಂಧ ಕಲ್ಪಿಸಬಹುದು, ಎಂದರೆ :–

(ಎ) 3ನೇ ಪ್ರಕರಣದ (2)ನೇ ಉಪಪ್ರಕರಣದ (ಬಿ) ಖಂಡದಡಿಯಲ್ಲಿ ಶಾಶ್ವತ ಸ್ವರೂಪದ ಸಾರ್ವಜನಿಕ ದಾಖಲೆಗಳನ್ನು ಯಾವ ಅವಧಿಯ ತರುವಾಯ ಸ್ವೀಕರಿಸಬಹುದೋ ಆ ಅವಧಿ ;

(ಬಿ) 6ನೇ ಪ್ರಕರಣದ (1)ನೇ ಉಪಪ್ರಕರಣದ (ಡಿ) ಖಂಡದಡಿಯಲ್ಲಿ ಸಾರ್ವಜನಿಕ ದಾಖಲೆಗಳನ್ನು ನಾಶಪಡಿಸತಕ್ಕ ರೀತಿ ಮತ್ತು ಅದಕ್ಕೆ ಅನ್ವಯಿಸುವ ಷರತ್ತುಗಳು ;

(ಸಿ) 6ನೇ ಪ್ರಕರಣದ (1)ನೇ ಉಪಪ್ರಕರಣದ (ಎಫ್) ಖಂಡದಡಿಯಲ್ಲಿ ವರ್ಗೀಕೃತ ಸಾರ್ವಜನಿಕ ದಾಖಲೆಗಳನ್ನು ಕೆಳದರ್ಜೆಗೆ ಇಳಿಸುವುದಕ್ಕಾಗಿ ನಿಯತಕಾಲಿಕ ಪುನರೀಕ್ಷಣೆಯನ್ನು ಮಾಡುವ ರೀತಿ ;

(ಡಿ) 6ನೇ ಪ್ರಕರಣದ (1)ನೇ ಉಪಪ್ರಕರಣದ (ಕೆ) ಖಂಡದಡಿಯಲ್ಲಿ ಹೇಳಿರುವಂತೆ ದಾಖಲೆಗಳ ಅಧಿಕಾರಿಯು ನಿರ್ದೇಶಕರಿಗೆ ವರದಿ ನೀಡತಕ್ಕ ರೀತಿ ;

(ಇ) 8ನೇ ಪ್ರಕರಣದ (ಇ) ಉಪಪ್ರಕರಣದಡಿಯಲ್ಲಿ ಸಾರ್ವಜನಿಕ ದಾಖಲೆಗಳನ್ನು ನಾಶಪಡಿಸುವ ಅಥವಾ ವಿಲೆ ಮಾಡತಕ್ಕ ರೀತಿ ಮತ್ತು ಅದಕ್ಕೆ ಅನ್ವಯಿಸುವ ಷರತ್ತುಗಳು ;

(ಎಫ್) 11ನೇ ಪ್ರಕರಣದ (2)ನೇ ಉಪ ಪ್ರಕರಣದಡಿಯಲ್ಲಿ ಚಾರಿತ್ರಿಕ ಅಥವಾ ರಾಷ್ಟ್ರೀಯ ಅಥವಾ ರಾಜ್ಯಮಟ್ಟದ ಪ್ರಾಮುಖ್ಯತೆಯುಳ್ಳ ದಾಖಲೆಗಳನ್ನು ಸಂಶೋಧನಾ ವಿದ್ವಾಂಸರುಗಳಿಗೆ ಲಭ್ಯವಾಗುವಂತೆ ಮಾಡತಕ್ಕ ರೀತಿ ಮತ್ತು ಅದಕ್ಕೆ ಅನ್ವಯಿಸುವ ಷರತ್ತುಗಳು ;

(ಜಿ) 12ನೇ ಪ್ರಕರಣದ (1)ನೇ ಉಪಪ್ರಕರಣದಡಿಯಲ್ಲಿ ಒಬ್ಬ ಸಂಶೋಧನಾ ವಿದ್ವಾಂಸರಿಗೆ ಸಾರ್ವಜನಿಕ ದಾಖಲೆಗಳನ್ನು ನೋಡಲು ಕೊಡುವುದಕ್ಕೆ ಅನ್ವಯಿಸುವ ವಿನಾಯಿತಿಗಳು ಮತ್ತು ನಿರ್ಬಂಧಗಳು ;

(ಎಚ್) 13ನೇ ಪ್ರಕರಣದ (3)ನೇ ಉಪಪ್ರಕರಣದಡಿಯಲ್ಲಿ ಮಂಡಳಿಯ ಸದಸ್ಯರುಗಳಿಗೆ ಸಂದಾಯವಾಗಬೇಕಾದ ಭತ್ಯೆಗಳು ;

(ಐ) 14ನೇ ಪ್ರಕರಣದ (ಡಿ) ಖಂಡದಡಿಯಲ್ಲಿ ಮಂಡಳಿಯು ತನ್ನ ಪ್ರಕಾರ್ಯಗಳನ್ನು ನೆರವೇರಿಸಬಹುದಾದ ವಿಷಯಗಳು ;

(ಜೆ) ನಿಯಮಿಸತಕ್ಕ ಅಥವಾ ನಿಯಮಿಸಬಹುದಾದ ಯಾವುವೇ ಇತರ ವಿಷಯಗಳು,

(3) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ. ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನಗಳ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಈ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳೂ ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಎರಡೂ ಸದನಗಳೂ ಒಪ್ಪಿದರೆ ಆ ನಿಯಮವು ಸಂದರ್ಭಾನುಸಾರ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರವೇ ಪರಿಣಾಮಕಾರಿಯಾಗತಕ್ಕದ್ದು ಅಥವಾ ಯಾವುದೇ

ಪರಿಣಾಮ ಹೊಂದಿರತಕ್ಕದ್ದಲ್ಲ; ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ಧತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕವಾಗತಕ್ಕದ್ದಲ್ಲ.

18. **ತೊಂದರೆ ನಿವಾರಣೆಗೆ ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದಲ್ಲಿ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ಆ ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಂತೆ ತಾನು ಅವಶ್ಯಕ ಅಥವಾ ಯುಕ್ತವೆಂದು ಭಾವಿಸುವಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಪೂರ್ಣಗೊಂಡ ತರುವಾಯ ಅಂಥ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ಆದೇಶವನ್ನು ಅದನ್ನು ಮಾಡಿದ ತರುವಾಯ, ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಉಭಯಸದನಗಳ ಮುಂದೆ ಮಂಡಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಈ ಕೆಳಗಿನವುಗಳಿಗಾಗಿ ಉಪಬಂಧ ಕಲ್ಪಿಸುವುದಕ್ಕಾಗಿ, ಕರ್ನಾಟಕ ಸಾರ್ವಜನಿಕ ದಾಖಲೆಗಳ ಅಧಿನಿಯಮವನ್ನು ಅಧಿನಿಯಮಿತಗೊಳಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ,–

(ಎ) ಭಾರತೀಯ ಐತಿಹಾಸಿಕ ದಾಖಲೆಗಳ ಆಯೋಗದ ಸಲಹೆಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಕೇಂದ್ರ ಸರ್ಕಾರದ ಸಾರ್ವಜನಿಕ ದಾಖಲೆಗಳ ಅಧಿನಿಯಮಕ್ಕೆ ಅನುಸಾರ ಸಾರ್ವಜನಿಕ ದಾಖಲೆಗಳ ನಿರ್ವಹಣೆಗೆ ಸಂಬಂಧಿಸಿದಂತೆ ಒಂದು ಶಾಸನವನ್ನು, ನಿಯಮಿಸಿದ ಅವಧಿಯೊಳಗೆ, ಸಿದ್ಧಪಡಿಸಿ ಅನುಷ್ಠಾನಗೊಳಿಸುವುದು;

(ಬಿ) ಕರ್ನಾಟಕ ರಾಜ್ಯದಲ್ಲಿ ದೈನಂದಿನ ಆಡಳಿತದಲ್ಲಿ ಹಾಗೂ ಸಂಶೋಧನೆಯನ್ನು ನಡೆಸುವ ವ್ಯಕ್ತಿಗಳಿಗೆ ಉಪಯೋಗವಾಗುವ ಸರ್ಕಾರಿ ದಾಖಲೆಗಳನ್ನು ಸಮರ್ಪಕವಾಗಿ ನಿರ್ವಹಿಸುವುದನ್ನು ಮತ್ತು ಸಂರಕ್ಷಿಸುವುದನ್ನು ಖಚಿತಪಡಿಸಬಹುದು;

(ಸಿ) ಜಿಲ್ಲಾಡಳಿತ, ಸಾರ್ವಜನಿಕ ಉದ್ದಿಮೆಗಳು, ನಿಗಮಗಳು ಅಥವಾ ಮಂಡಳಿಗಳು, ಆಯೋಗಗಳು ಅಥವಾ ಸಮಿತಿಗಳ ದಾಖಲೆಗಳ ಸೂಕ್ತ ಸಂಗ್ರಹಣೆ, ನಿರ್ವಹಣೆ, ಆಡಳಿತ ಮತ್ತು ಸಂರಕ್ಷಣೆ ಮಾಡುವುದನ್ನು ಹಾಗೂ ಐತಿಹಾಸಿಕ ಮತ್ತು ರಾಷ್ಟ್ರೀಯ ಪ್ರಾಮುಖ್ಯತೆಯ ದಾಖಲೆಗಳನ್ನು ಖಾಸಗಿ ಮೂಲಗಳಿಂದ ಪಡೆಯುವುದನ್ನು, ಕೂಡಾ ಖಚಿತಪಡಿಸಿಕೊಳ್ಳುವುದು;

(ಡಿ) ಸಾರ್ವಜನಿಕ ದಾಖಲೆಗಳ ನಿರ್ವಹಣೆ ಮತ್ತು ಸಂರಕ್ಷಣೆಗೆ ಸಂಬಂಧಿಸಿದ ವಿಷಯಗಳು ಹಾಗೂ ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ಇತರ ವಿಷಯಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಸಲಹೆ ನೀಡಲು ರಾಜ್ಯ ಪತ್ರಾಗಾರ ಸಲಹಾ ಮಂಡಳಿಯನ್ನು ರಚಿಸುವುದು.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ 25 ಲಕ್ಷ ರೂಪಾಯಿಗಳ ಆವರ್ತಕ ವೆಚ್ಚ ಮತ್ತು 75 ಲಕ್ಷ ರೂಪಾಯಿಗಳ ಅನಾವರ್ತಕ ವೆಚ್ಚ ಉಂಟಾಗುತ್ತದೆ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ

**ಖಂಡ 3 :** (2)ನೇ ಉಪ ಖಂಡದ (ಬಿ) ಬಾಬು, ಶಾಶ್ವತ ಸ್ವರೂಪದ ಸಾರ್ವಜನಿಕ ದಾಖಲೆಗಳನ್ನು ತನ್ನಲ್ಲಿ ಇಟ್ಟುಕೊಳ್ಳಲು ಒಪ್ಪಿಕೊಳ್ಳುವ ಅವಧಿಯನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 6 :** (1) **ನೇ ಉಪ ಖಂಡದ,–**

(i) (ಡಿ) ಬಾಬು, ದಾಖಲೆಗಳ ಅಧಿಕಾರಿಯು ಸಾರ್ವಜನಿಕ ದಾಖಲೆಗಳ ನಾಶಪಡಿಸುವುದಕ್ಕೆ, ನಿಯತಕಾಲಿಕವಾಗಿ ಪುನರೀಕ್ಷಣೆಯನ್ನು ಮಾಡಬೇಕಾದ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(ii) (ಎಫ್) ಬಾಬು, ದಾಖಲೆಗಳ ಅಧಿಕಾರಿಯು ವರ್ಗೀಕರಣವಾದ ಸಾರ್ವಜನಿಕ ದಾಖಲೆಗಳನ್ನು ಕೆಳದರ್ಜೆಗೆ ಇಳಿಸುವುದಕ್ಕಾಗಿ ನಿಯತಕಾಲಿಕ ಪುನರೀಕ್ಷಣೆಯನ್ನು ಮಾಡಬೇಕಾದ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(iii) (ಕೆ) ಬಾಬು, ದಾಖಲೆಗಳ ಅಧಿಕಾರಿಯು, ನಿರ್ದೇಶಕರಿಗೆ ವಾರ್ಷಿಕ ವರದಿಗಳನ್ನು ಸಲ್ಲಿಸುವ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 8:** (1)ನೇ ಉಪ ಖಂಡವು, ಸಾರ್ವಜನಿಕ ದಾಖಲೆಗಳನ್ನು ನಾಶಪಡಿಸುವ ವಿಧಾನವನ್ನು ಮತ್ತು ಷರತ್ತುಗಳನ್ನು ನಿಯಮಗಳ ಮೂಲಕ ನಿಯಮಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 11:** (2)ನೇ ಉಪ ಖಂಡವು, ಯಾವೊಬ್ಬ ನೈಜ ಸಂಶೋಧನಾ ವಿದ್ವಾಂಸರಿಗೆ ಐತಿಹಾಸಿಕ ಅಥವಾ ರಾಷ್ಟ್ರೀಯ ಪ್ರಾಮುಖ್ಯತೆಯ ಯಾವುದೇ ಖಾಸಗಿ ದಾಖಲೆಯು ಲಭ್ಯವಾಗುವಂತೆ ಮಾಡಲು, ರಾಜ್ಯ ಪತ್ರಾಗಾರಕ್ಕೆ ವಿನಾಯಿತಿಗಳನ್ನು ಮತ್ತು ನಿರ್ಬಂಧಗಳನ್ನು ನಿಯಮಗಳ ಮೂಲಕ ನಿಯಮಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 12:**

(i) (1)ನೇ ಉಪ ಖಂಡವು, 12ನೇ ಖಂಡ (1)ನೇ ಉಪ ಖಂಡದಲ್ಲಿ ಹೇಳಿರುವ ಯಾವುದೇ ದಾಖಲೆಯನ್ನು ಯಾವೊಬ್ಬ ನೈಜ ಸಂಶೋಧನಾ ವಿದ್ವಾಂಸರಿಗೆ ಲಭ್ಯವಾಗುವಂತೆ ಮಾಡುವ ವಿಧಾನ ಮತ್ತು ಷರತ್ತುಗಳನ್ನು ನಿಯಮಗಳ ಮೂಲಕ ನಿಯಮಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(ii) (2)ನೇ ಉಪಖಂಡವು, ದಾಖಲೆಗಳ ಸೃಜನಾ ಏಜೆನ್ಸಿಯು ತನ್ನ ಅಬಿರಕ್ಷೆಯಲ್ಲಿರುವ ಸಾರ್ವಜನಿಕ ದಾಖಲೆಯನ್ನು ಯಾವೊಬ್ಬ ವ್ಯಕ್ತಿಯು ನೋಡಲು ಅನುಮತಿಯನ್ನು ನೀಡಬಹುದಾದ ವಿಧಾನ ಮತ್ತು ಒಳಪಡಬೇಕಾದ ಷರತ್ತುಗಳನ್ನು ನಿಯಮಗಳ ಮೂಲಕ ನಿಯಮಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 13:** (3)ನೇ ಉಪ ಖಂಡವು, (2)ನೇ ಉಪ ಪ್ರಕರಣದ (ಸಿ) ಖಂಡದಡಿಯಲ್ಲಿ ನಾಮನಿರ್ದೇಶಿತರಾದ ಸದಸ್ಯರುಗಳಿಗೆ ಸಂದಾಯ ಮಾಡತಕ್ಕ ಭತ್ಯೆಗಳನ್ನು ನಿಯಮಗಳ ಮೂಲಕ ನಿಯಮಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 14:** (ಡಿ) ಬಾಬು, ಮಂಡಳಿಯು ನೆರವೇರಿಸಬಹುದಾದ ಇತರ ಪ್ರಕಾರ್ಯಗಳನ್ನು ನಿಯಮಗಳ ಮೂಲಕ ನಿಯಮಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 17:** ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಬಿ. ಎಸ್. ಯಡಿಯೂರಪ್ಪ**
**ಮುಖ್ಯಮಂತ್ರಿ**

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**FIFTH SESSION**

## THE KARNATAKA STATE PUBLIC RECORDS BILL, 2010

**(L.A. Bill No. 6 of 2010)**

A Bill to regulate the management, administration and preservation of public records of the State Government, State Public Sector Undertakings, Statutory bodies and corporations, commissions and committees constituted by the State Government and matters connected therewith or incidental thereto.

Be it enacted by the Karnataka State Legislature in the Sixty first year of the Republic of India as follows:-

**1. Short title and Commencement.-** (1) This Act may be called the Karnataka State Public Records Act, 2010.

(2) It shall come into force on such date as the State Government may, by notification in the Official Gazette, appoint.

**2. Definitions.-** In this Act, unless the context otherwise requires,-

(a) "Board" means the State Archival Advisory Board constituted under sub-section (1) of section 13;

(b) "Director" means the Director of Archives appointed by the State Government and includes any officer authorized by that Government to perform the duties of the Director;

(c) "Head of the Archives" means a person holding the charge of the Archives of the State;

(d) "Public records" includes,-

(i) any document, manuscript and file;

(ii) any microfilm, microfiche and facsimile copy of a document;

(iii) any reproduction of image or images embodied in such microfilm, whether enlarged or not; and

(iv) any other material produced by a computer or by any other device of any records creating agency.

(e) 'records creating agency' includes,-

(i) in relation to the State Government, any Ministry, Department or office of the State Government;

(ii) in relation to any statutory body or corporation wholly or substantially controlled or financed by the State Government or any commission or any committee constituted by the State Government, the offices of the said body, corporation, commission or committee;

(f) "Records Officer" means the officer nominated by the records creating agency under sub-section (1) of section 5;

(g) "State" means the State of Karnataka.

**3. Power of the State Government to co-ordinate, regulate and supervise operations connected with administration, management etc., of public records.-** (1) The State Government shall have the power to co-ordinate, regulate and supervise the operations connected with the administration, management, preservation, selection, disposal and destroying of public records under this Act.

(2) The State Government in relation to the public records of the records creating agencies may, by order, authorize the Director of Archives subject to such conditions as may be specified in the order, to carry out all or any of the following functions, namely:-

(a) supervision, management and control of the Archives;

(b) acceptance for deposit of public records of permanent nature after such period as may be prescribed;

(c) custody, use and withdrawal of public records;

(d) arrangement, preservation and exhibition of public records;

(e) preparation of inventories, indices, catalogues and other reference media of public records;

(f) analyzing, developing, promoting and co-ordinating the standards, procedures and the techniques for improvement of the records management system;

(g) ensuring the maintenance, arrangement and security of public records in the Archives and in the office of the records creating agency;

(h) promoting utilization of available space and maintenance of equipments for preserving public records;

(i) tendering advice to Records creating Agencies on the compilation, classification and disposal of records and application of standards, procedures and techniques of records management;

(j) survey and inspection of public records;

(k) organizing training programmes in various disciplines of Archives administration and records management;

(l) accepting records from any private source;

(m) regulating access to public records;

(n) receiving records from defunct bodies and making arrangement for securing public records in the event of national/State emergency;

(o) receiving reports on records management and disposal practices from the records officer;

(p) providing authenticated copies of, or extracts from public records;

(q) destroying or disposal of public records

(r) obtaining on lease or purchasing or accepting as gift any document of historical, State or national importance;

**4. Prohibition against taking of public records out of the State.-** No person shall take or cause to be taken out of the State any public records without the prior approval of the State Government.

**5. Records Officer.-** (1) Every Records creating agency shall nominate one of its officers as Records Officer to discharge the functions under this Act.

(2) Every Records Creating Agency may set up such number of record rooms in such places as it deems fit and shall place each record room under the charge of a Records Officer.

**6. Responsibilities of Records Officer.-** (1) The records officer shall be responsible for,-

(a) proper arrangement, maintenance and preservation of public records under his charge;

(b) periodical review of all public records and weeding out public records of ephemeral value;

(c) appraisal of public records which are more than twenty five years old in consultation with the State Archives with a view to retaining public records of permanent value;

(d) destruction of public records in such manner and subject to such conditions as may be prescribed under sub-section (1) of section 8;

(e) compilation of a schedule of retention for public records in consultation with State Archives;

(f) periodical review for downgrading of classified public records in such manner as may be prescribed;

(g) adoption of such standards, procedures and techniques as may be recommended from time to time by the State Archives for improvement of record management system and maintenance of securing of public records.

(h) compilation of annual indices of public records.

(i) compilation of organizational history and annual supplement thereto;

(j) assisting the State Archives in public records management

(k) submission of annual reports to the Director in such manner as may be prescribed;

(l) transferring of records of any defunct body to the State Archives for preservation.

(2) The records officer shall act under the direction of the Director while discharging the responsibilities specified in sub-section (1).

**7. Records Officer to take appropriate action in the event of unauthorized removal, destruction etc., of Public Records in his custody.-** (1)The Records Officer shall, in the event of any unauthorized removal, destruction, defacement or alteration of any public records under his charge, forthwith take appropriate action for the recovery or restoration of such public records.

(2) The Records Officer shall submit a report in writing to the Director without any delay on any information of unauthorized removal, destruction, defacement or alteration of any public records under his charge and the action initiated by him and shall take action as he may deem necessary subject to the directions, if any given by the Director.

(3) The Records Officer may seek assistance from any Government officer or any other person for the purpose of recovery or restoration of public records and such officer or person shall render all assistance to the records officer.

**8. Destruction or disposal of public records.-** (1) No public record shall be destroyed or otherwise disposed of except in such manner and subject to such conditions as may be prescribed.

(2) No records, which is more than hundred years old shall be destroyed except where in the opinion of the Director, it is so defaced or is in such condition that it cannot be put to any archival use.

**9. Penalty for contraventions.-** Whoever contravenes any of the provisions of section 4 or section 8 shall be punishable with imprisonment for a term which may extend to five years or with fine which may extend to twentyfive thousand rupees or with both.

**10. Public records bearing security classification.-** No public records bearing security classification shall be transferred to the State Archives.

**11. Receipt of records from private sources.-** (1) The State Archives may accept any record of historical or national importance from any private source by way of gift, purchase or otherwise.

(2) The State Archives may in such manner and subject to such conditions as may be prescribed, make any record referred to in sub-section (1) available to any bona-fide research scholar.

**12. Access to Public Records.-** (1) All unclassified public records as are more than thirty years old and are transferred to the State Archives may be subject to such exceptions and restrictions as may be prescribed made available to any bona-fide research scholar.

**Explanation:-** For the purposes of this sub-section, the period of thirty years shall be reckoned from the year of the opening of the public record.

(2) Any records creating agency may grant permission to any person to access to any public record in its custody in such manner and subject to such conditions as may be prescribed.

**13. Archival Advisory Board.-** (1) The State Government may, by notification in the Official Gazette, constitute an Archival Advisory Board for the purposes of this Act.

(2) The Board shall consist of the following members, namely:-

(a) Secretary to the Government incharge of culture - Chairman, Ex-officio;

(b) one officer not below the rank of Joint Secretary to Government of Karnataka, each from the departments of Personnel and Administrative Reforms, Finance, Law & Parliamentary Affairs and Legislation
- Member, Ex-officio;

(c) three persons to be nominated by the State Government for a period not exceeding three years, one being an Archivist by profession and two being professors in the post-graduate Department of History in any recognized Universities from the State - Members

(d) Director of Archives - Member-Secretary, Ex-officio

(3) The members nominated under clause (c) of sub-section (2) shall be paid such allowances as may be prescribed.

**14. Functions of the Board.-** The Board shall perform the following functions, namely:-

(a) advise the State Government on matters concerning the administration, management, conservation and use of public records;

(b) lay down guidelines for training of Archivists;

(c) give directions for acquisition of records from private custody;

(d) deal with such other matters as may be prescribed.

**15. Power of the Director to lay down norms and standards for courses in archival science.-** The Director shall have the power to lay down norms, and standards for courses, curricula, assessment and examinations relating to the training in archival science and other ancillary subjects.

**16. Protection of action taken in good faith.-** No suit, prosecution or other legal proceedings shall lie against any person in respect of anything which is in good faith done or intended to be done in pursuance of this Act or the rules made there under.

**17. Power to make rules.-** (1) The State Government may, by notification in the Official Gazette, make rules to carry out the purposes of this Act.

(2) In particular and without prejudice to the generality of the foregoing power, such rules may provide for all or any of the following matters, namely:-

(a) the period after which public records of permanent nature may be accepted under clause (b) of sub-section (2) of section 3;

(b) the manner in which and the conditions subject to which public records can be destroyed under clause (d) of sub-section (1) of section 6;

(c) the manner in which periodical review of classified public records for downgrading shall be undertaken under clause (f) of sub-section (1) of section 6;

(d) the manner in which the records officer will report to the Director under clause (k) of sub-section (1) of section 6;

(e) the manner in which and the conditions subject to which public records may be destroyed or disposed of under sub-section (1) of section 8;

(f) the manner in which and the conditions subject to which records of historical or national or State importance may be made available to research scholar under sub-section (2) of section 11;

(g) exceptions and restrictions subject to which public records may be made available to a research scholar under sub-section (1) of section 12;

(h) the allowances payable to members of the Board under sub-section (3) of section 13;

(i) the matters with respect to which the Board may perform its functions under clause (d) of section 14;

(j) any other matter which is required to be, or may be, prescribed.

(3) Every rule made under this Act shall be laid, as soon as may be after it is made, before each House of State Legislature while it is in session, for a total period of thirty days which may be comprised in one session or in two or more successive sessions, and if, before the expiry of the session immediately following the session or the successive sessions aforesaid, both Houses agree in making any modification in the rule or both Houses agree that the rule should not be made, the rule shall thereafter have effect only in such modified form or be of no effect, as the case may be; so, however, that any such modification or annulment shall be without prejudice to the validity of anything previously done under that rule.

**18. Power to remove difficulty.-** (1) If any difficulty arises in giving effect to the provisions of this Act, the State Government may, by order published in the official Gazette, make such provisions, not inconsistent with the provisions of this Act, as appear to it to be necessary or expedient for removing the difficulty:

Provided that, no such order shall be made after the expiry of a period of two years from the date of commencement of this Act.

(2) Every order made under sub-section (1) shall be laid, as soon as may be, after it is made, before each House of the State Legislature.

## STATEMENT OF OBJECTS AND REASONS

It is considered necessary to enact the Karnataka Public Records Act, providing a provision to;-

(a) implement the suggestions of the Indian Historical Records Commission to prepare a legislation regarding the maintenance of public records on par with the public records Act of the Central Government within the prescribed time and implement the same;

(b) ensure that proper maintenance and preservation of the Government records in the State of Karnataka which will be useful in the day to day administration and to the persons conducting research;

(c) ensure proper procurement, maintenance, administration and preservation of records of District administration, Public undertakings, Corporations or Boards, Commissions or Committees and also to receive from private sources records of historical and national importance;

(d) constitute State Archival Advisory Board to advice State Government on matter relating to the maintenance and conservation of public records and other matters connected therewith or incidental thereto.

Hence, the Bill.

## FINANCIAL MEMORANDUM

There will be a recurring expenditure of Rs.25 Lakhs and non-recurring expenditure of Rs.75 Lakhs for the proposed legislative measure.

## MEMORANDUM REGARDING DELEGATED LEGISLATION

**Clause 3:** Item(b) of sub-clause (2) empowers the State Government to prescribe by rules the period after which the deposit of public records of permanent nature are accepted.

**Clause 6:** sub clause (1),-

(i) Item (d) empowers the State Government to prescribe by rules the manner in which the periodical review for destruction of public records shall be done by the Records Officer.

(ii) Item (f) empowers the State Government to prescribe by rules the manner in which periodical review for downgrading of classified public records shall be done by the Records Officer..

(iii) Item (k) empowers the State Government to prescribe by rules the manner of submission of annual reports to the Director by the Records Officer.

**Clause 8:** Sub-clause (1) empowers the State Government to prescribe by rules the manner and conditions of the destruction of public records.

**Clause 11:** Sub-clause (2) empowers the State Government to prescribe by rules in which exceptions and restrictions the State archives may make available any private record of historical or National importance to any bona-fide research scholar.

**Clause 12:** (i) Sub-clause (1) empowers the State Government to prescribe by rules the manner and conditions to make any record referred to in sub-clause(1)of clause 12 available to any bona-fide research scholar.

(ii) Sub-clause (2) empowers the State Government to prescribe by rules the manner and conditions subject to which records creating agency may grant permission to any person to access to public records in its custody.

**Clause 13:** Sub-clause (3) empowers the State Government to prescribe by rules allowances payable to members nominated under clause (c) of sub-section(2).

**Clause 14:** Item (d) empowers the State Government to prescribe by rules the other functions that may be performed by the Board.

**Clause 17:** Empowers the State Government to make rules to carry out the purposes of this Act.

The above delegation of Legislative powers is normal in character.

**B.S.YEDIYURAPPA**
Chief Minister

**S.B. PATIL**
Secretary
Karnataka Legislative Assembly

**S.B. PATIL**
Secretary
Karnataka Legislative Assembly

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಬುಧವಾರ, ಮಾರ್ಚ್ ೧೦, ೨೦೧೦ (ಫಾಲ್ಗುಣ ೧೯, ಶಕ ವರ್ಷ ೧೯೩೧) | ನಂ. ೨೪೦ |
|---|---|---|

## KARNATAKA LEGISLATIVE ASSEMBLY SECRETARIAT

## NOTIFICATION

**No. KLA/LGA/44/Bill/2010, Bangalore, Dated : 10th March, 2010**

The following Bill was introduced in Legislative Assembly on 10th March, 2010.

**THE KARNATAKA BORDER AREA DEVELOPMENT AUTHORITY BILL, 2010**

**(L.A. Bill No. 5 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಐದನೇ ಅಧಿವೇಶನ**

**ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ವಿಧೇಯಕ 2010**
**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 5)**

ಕರ್ನಾಟಕದ ಗಡಿ ಪ್ರದೇಶದ ಅಭಿವೃದ್ಧಿಗಾಗಿ **ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ**ವೊಂದರ ಸ್ಥಾಪನೆಗೆ ಮತ್ತು ಕರ್ನಾಟಕ ಗಡಿ ಅಭಿವೃದ್ಧಿಗೆ ಸಂಬಂಧಪಟ್ಟ ಯೋಜನೆಗಳು ಮತ್ತು ಕಾರ್ಯಕ್ರಮಗಳ ಅನುಷ್ಠಾನ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನಕ್ಕೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ವಿಧೇಯಕ.

ಕರ್ನಾಟಕದ ಗಡಿ ಪ್ರದೇಶದ ಅಭಿವೃದ್ಧಿಗಾಗಿ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರವೊಂದರ ಸ್ಥಾಪನೆಗೆ ಮತ್ತು ಕರ್ನಾಟಕದ ಗಡಿ ಪ್ರದೇಶದ ಅಭಿವೃದ್ಧಿಗೆ ಸಂಬಂಧಪಟ್ಟ ಯೋಜನೆಗಳು ಮತ್ತು ಕಾರ್ಯಕ್ರಮಗಳ ಅನುಷ್ಠಾನ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನಕ್ಕೆ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ,

ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು.

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಪ್ರಾಧಿಕಾರ" ಎಂದರೆ, 3 ನೇ ಪ್ರಕರಣದ ಮೇರೆಗೆ ರಚಿಸಲಾದ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ;

(ಬಿ) "ಗಡಿ ಪ್ರದೇಶ" ಎಂದರೆ ಅನುಸೂಚಿಯಲ್ಲಿ ನಮೂದಿಸಲಾಗಿರುವ ಕರ್ನಾಟಕ ರಾಜ್ಯದ ಗಡಿ ಭಾಗದಲ್ಲಿರುವ ತಾಲ್ಲೂಕುಗಳು ಹಾಗೂ ಇತರ ಪ್ರದೇಶಗಳು;

(ಸಿ) "ಅಧ್ಯಕ್ಷ" ಎಂದರೆ ಪ್ರಾಧಿಕಾರದ ಅಧ್ಯಕ್ಷ;

(ಡಿ) "ಇಲಾಖೆ" ಎಂದರೆ ಯಾವುದೇ ಕಾನೂನಿನ ಮೂಲಕ ಅಥವಾ ಅದರಡಿಯಲ್ಲಿ ರಾಜ್ಯ ಸರ್ಕಾರದಿಂದ ಸ್ಥಾಪಿತವಾದ ಯಾವುದೇ ನಿಕಾಯ ಅಥವಾ ನಿಗಮ ಅಥವಾ ರಾಜ್ಯ ಸರ್ಕಾರದಿಂದ ಆರ್ಥಿಕ ನೆರವು ಪಡೆಯುತ್ತಿರುವ ಯಾವುದೇ ಸಂಸ್ಥೆ ಅಥವಾ ನಿಕಾಯವೂ ಸೇರಿದಂತೆ ರಾಜ್ಯ ಸರ್ಕಾರದ ಎಲ್ಲಾ ಇಲಾಖೆಗಳು:

(ಇ) "ಸದಸ್ಯ " ಎಂದರೆ ಪ್ರಾಧಿಕಾರದ ಸದಸ್ಯ ;

(ಎಫ್) "ಯೋಜನೆಗಳು ಮತ್ತು ಕಾರ್ಯಕ್ರಮಗಳು" ಎಂದರೆ, ವಿವಿಧ ಇಲಾಖೆಗಳಲ್ಲಿ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿಗಾಗಿ ಪ್ರಾಧಿಕಾರದಿಂದ ಸಿದ್ಧಪಡಿಸಿದ ವಾರ್ಷಿಕ ಯೋಜನೆಗಳು ಮತ್ತು ಕಾರ್ಯಕ್ರಮಗಳು;

(ಜಿ) "ಕಾರ್ಯದರ್ಶಿ" ಎಂದರೆ ಪ್ರಾಧಿಕಾರದ ಕಾರ್ಯದರ್ಶಿ;

(ಹೆಚ್) "ವಿನಿಯಮಗಳು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಲಾದ ವಿನಿಯಮಗಳು;

**ಅಧ್ಯಾಯ – II**

**3. ಪ್ರಾಧಿಕಾರದ ರಚನೆ** :– (1) ಈ ಅಧಿನಿಯಮವು ಪ್ರಾರಂಭವಾದ ತರುವಾಯ ಸಾಧ್ಯವಾದಷ್ಟು ಬೇಗನೆ, ಈ ಅಧಿನಿಯಮದ ಉದ್ದೇಶಗಳಿಗಾಗಿ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಎಂದು ಕರೆಯಲಾಗುವ ಪ್ರಾಧಿಕಾರವನ್ನು ರಚಿಸತಕ್ಕದ್ದು ಮತ್ತು ಅದರ ಕೇಂದ್ರ ಸ್ಥಳವು ಬೆಂಗಳೂರಿನಲ್ಲಿ ಇರತಕ್ಕದ್ದು.

(2) ಪ್ರಾಧಿಕಾರವು ಕರಾರು ಮಾಡಿಕೊಳ್ಳಲು ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿ ಇರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೊಳಗಾಗತಕ್ಕದ್ದು.

(3) ಪ್ರಾಧಿಕಾರವು ಈ ಮುಂದಿನ ಸದಸ್ಯರುಗಳನ್ನು ಹೊಂದಿರತಕ್ಕದ್ದು:–

(ಎ) ಗಡಿ ಪ್ರದೇಶ ಅಭಿವೃದ್ಧಿಗಾಗಿ ಕೆಲಸ ಮಾಡಿರುವಂಥ ಸರ್ಕಾರದಿಂದ ನಾಮ ನಿರ್ದೇಶಿತನಾದ ಒಬ್ಬ ವ್ಯಕ್ತಿಯು ಪ್ರಾಧಿಕಾರದ ಅಧ್ಯಕ್ಷರಾಗಿರತಕ್ಕದ್ದು.

(ಬಿ) ಗಡಿ ಪ್ರದೇಶಗಳ ಸಮಸ್ಯೆಗಳ ಅರಿವಿರುವ ಹಾಗೂ ಸಾಹಿತ್ಯ, ಆಡಳಿತ, ಶಿಕ್ಷಣ ಅಥವಾ ಕಾನೂನು ಕ್ಷೇತ್ರಗಳಲ್ಲಿ ವಿಶೇಷ ಜ್ಞಾನ ಅಥವಾ ಪ್ರಾಯೋಗಿಕ ಅನುಭವ ಹೊಂದಿರುವ ರಾಜ್ಯ ಸರ್ಕಾರದಿಂದ ನಾಮ ನಿರ್ದೇಶಿತರಾದ **ಏಳು** ಜನ .... ಸದಸ್ಯರು

(ಸಿ) ಸರ್ಕಾರದ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ .... ಪದನಿಮಿತ್ತ ಸದಸ್ಯರು

(ಡಿ) ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ .... ಪದನಿಮಿತ್ತ ಸದಸ್ಯರು

(ಇ) ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಇಲಾಖೆ .... ಪದನಿಮಿತ್ತ ಸದಸ್ಯರು

(ಎಫ್) ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ .... ಪದನಿಮಿತ್ತ ಸದಸ್ಯರು

(ಜಿ) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ .... ಪದನಿಮಿತ್ತ ಸದಸ್ಯರು

(ಹೆಚ್) ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು ... ಪದನಿಮಿತ್ತ ಸದಸ್ಯ

(ಐ) ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ ... ಪದನಿಮಿತ್ತ ಸದಸ್ಯ

(ಜೆ) ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ... ಪದನಿಮಿತ್ತ ಸದಸ್ಯ

(ಕೆ) ಪ್ರಾಧಿಕಾರದ ಕಾರ್ಯದರ್ಶಿ ... ಸದಸ್ಯ – ಕಾರ್ಯದರ್ಶಿ

**4. ಪದಾವಧಿ ಮತ್ತು ಸೇವಾ ಷರತ್ತುಗಳು.–** (1) ರಾಜ್ಯ ಸರ್ಕಾರದ ಇಚ್ಛೆಗೆ ಒಳಪಟ್ಟು ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ಅಧ್ಯಕ್ಷ ಮತ್ತು ಇತರೆ ಅಧಿಕಾರೇತರ ಸದಸ್ಯರುಗಳು ಮೂರು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು. ಸರ್ಕಾರದ ಅಧಿಕಾರಿ ಸದಸ್ಯರಿಗೆ ಸಂಬಂಧಿಸಿದಂತೆ ಇದು ಅನ್ವಯವಾಗತಕ್ಕದಲ್ಲ.

(2) ಅಧ್ಯಕ್ಷರು ಅಥವಾ ಪದನಿಮಿತ್ತ ಸದಸ್ಯರ ಹೊರತಾಗಿ ಯಾವೊಬ್ಬ ಸದಸ್ಯರೂ ಅದಕ್ಕೆ ತಮ್ಮ ಸಹಿ ಹಾಕಿ ರಾಜ್ಯ ಸರ್ಕಾರಕ್ಕೆ ಪತ್ರ ಬರೆದು ತಮ್ಮ ಸದಸ್ಯತ್ವಕ್ಕೆ ರಾಜೀನಾಮೆ ನೀಡಬಹುದು. ಆದರೆ ಅವರ ರಾಜೀನಾಮೆಯು ಅಂಗೀಕಾರವಾಗುವವರೆಗೆ ಹುದ್ದೆಯಲ್ಲಿ ಮುಂದುವರೆಯತಕ್ಕದ್ದು

(3) ಅಧ್ಯಕ್ಷರ ಅಥವಾ ಯಾವೊಬ್ಬ ಸದಸ್ಯರ ಹುದ್ದೆಗಳಲ್ಲಿ ಉಂಟಾಗುವ ಆಕಸ್ಮಿಕ ಖಾಲಿ ಸ್ಥಾನಕ್ಕೆ ರಾಜ್ಯ ಸರ್ಕಾರವು ಒಬ್ಬ ವ್ಯಕ್ತಿಯನ್ನು ಸಂದರ್ಭಾನುಸಾರ ಅಧ್ಯಕ್ಷರಾಗಿ ಅಥವಾ ಸದಸ್ಯರಾಗಿ ನಾಮ ನಿರ್ದೇಶನ ಮಾಡುವ ಮೂಲಕ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ನಾಮನಿರ್ದೇಶಿತರಾದ ಅಧ್ಯಕ್ಷ ಅಥವಾ ಸದಸ್ಯರು ತನಗಿಂತ ಮೊದಲಿದ್ದ ವ್ಯಕ್ತಿಯ ಪದಾವಧಿಯಲ್ಲಿ ಪೂರ್ಣವಾಗದೆ ಉಳಿದ ಭಾಗದವರೆಗೆ ಅಧಿಕಾರವನ್ನು ಹೊಂದಿರತಕ್ಕದ್ದು.

(4) ಅಧ್ಯಕ್ಷರು ಮತ್ತು ಇತರ ಸದಸ್ಯರು ನಿಯಮಿಸಬಹುದಾದಂಥ ಭತ್ಯೆಗಳನ್ನು ಪಡೆಯತಕ್ಕದ್ದು.

(5) ಅಧ್ಯಕ್ಷರು ಮತ್ತು ಇತರ ಸದಸ್ಯರುಗಳಿಗೆ ಸಂದಾಯ ಮಾಡಬೇಕಾದ ಭತ್ಯೆಗಳನ್ನು ಪ್ರಾಧಿಕಾರದ ನಿಧಿಯಿಂದ ಭರಿಸತಕ್ಕದ್ದು.

(6) ಪ್ರಾಧಿಕಾರದ ಯಾವುದೇ ಕ್ರಮ ಅಥವಾ ವ್ಯವಹರಣೆಯು ಪ್ರಾಧಿಕಾರದಲ್ಲಿ ಯಾವುದೇ ಖಾಲಿಸ್ಥಾನವಿರುವುದರಿಂದ ಅಥವಾ ಪ್ರಾಧಿಕಾರದ ರಚನೆಯಲ್ಲಿ ದೋಷವಿದೆ ಎಂಬ ಕಾರಣ ಮಾತ್ರದಿಂದಲೇ ಅಮಾನ್ಯವಾಗತಕ್ಕದ್ದಲ್ಲ.

**5. ಹುದ್ದೆಯ ಸದಸ್ಯತ್ವಕ್ಕೆ ಅನರ್ಹತೆ.–** (1) ಒಬ್ಬ ವ್ಯಕ್ತಿಯು, ಅವನು, –

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧ:ಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧ ನಿರ್ಣೀತನಾಗಿದ್ದು ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ, ಅಥವಾ

(ಬಿ) ಅಸ್ವಸ್ಥಚಿತ್ತದವನಾಗಿದ್ದು, ಹಾಗೆಂದು ಒಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ : ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ : ಅಥವಾ

(ಡಿ) ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ ಒಂದು ನಿಕಾಯ ಅಥವಾ ನಿಗಮದ ಸೇವೆಯಿಂದ ತೆಗೆದು ಹಾಕಲಾದವನಾಗಿದ್ದರೆ ಅಥವಾ ವಜಾ ಆದವನಾಗಿದ್ದರೆ : ಅಥವಾ

(ಇ) ಪ್ರಾಧಿಕಾರದ ಆದೇಶದಿಂದ ಮಾಡಲಾದ ಯಾವುದೇ ಕಾರ್ಯದಲ್ಲಿ ಅಥವಾ ಪ್ರಾಧಿಕಾರದೊಡನೆ ಅಥವಾ ಅದರ ಮೇರೆಗೆ ಅಥವಾ ಅದರ ಮೂಲಕ ಅಥವಾ ಅದರ ಪರವಾಗಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಸ್ವತ: ಅವನು ಅಥವಾ ಅವನ ಪಾಲುದಾರನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ:

(ಎಫ್) ಪ್ರಾಧಿಕಾರದ ಪರವಾಗಿ ವೇತನ ಪಡೆಯುವ ನ್ಯಾಯವಾದಿಯಾಗಿ ನಿಯೋಜಿತನಾದರೆ ಅಥವಾ ಪ್ರಾಧಿಕಾರದ ವಿರುದ್ಧವಾಗಿ ನ್ಯಾಯವಾದಿಯ ನಿಯೋಜನೆಯನ್ನು ಒಪ್ಪಿಕೊಂಡಿದ್ದರೆ,

– ಸದಸ್ಯನಾಗಿ ನೇಮಿತನಾಗುವುದಕ್ಕೆ ಮತ್ತು ಸದಸ್ಯನಾಗುವುದಕ್ಕೆ ಅನರ್ಹನಾಗಿರತಕ್ಕದ್ದು.

(2) ಯಾವೊಬ್ಬ ವ್ಯಕ್ತಿಯನ್ನು, ಆತನು ಪ್ರಾಧಿಕಾರದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ಜಾಹೀರಾತನ್ನು ಪ್ರಕಟಿಸಲಾಗಿರುವ ಯಾವುದೇ ವೃತ್ತ ಪತ್ರಿಕೆಯಲ್ಲಿ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆ ಎಂಬ ಕಾರಣ ಮಾತ್ರದಿಂದಲೇ ಉಪಪ್ರಕರಣ (1)ರ (ಇ) ಖಂಡದ ಅಡಿಯಲ್ಲಿ ಅನರ್ಹಗೊಳಿಸತಕ್ಕದ್ದಲ್ಲ ಅಥವಾ ಸದರಿ ಖಂಡದ ಅರ್ಥವ್ಯಾಪ್ತಿಯಲ್ಲಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಷೇರು ಅಥವಾ ಹಿತಾಸಕ್ತಿ ಹೊಂದಿರುವನೆಂದು ಭಾವಿಸತಕ್ಕದ್ದಲ್ಲ.

**6. ಸದಸ್ಯನನ್ನು ತೆಗೆದುಹಾಕುವುದು.**– (1) ರಾಜ್ಯ ಸರ್ಕಾರವು ಅಧ್ಯಕ್ಷ ಅಥವಾ ಇತರ ಸದಸ್ಯನನ್ನು ಅವನು,–

(ಎ) 5ನೇ ಪ್ರಕರಣದಲ್ಲಿ ಹೇಳಲಾದ ಯಾವುದೇ ಅನರ್ಹತೆಗಳಿಗೆ ಒಳಪಟ್ಟರೆ:

ಪರಂತು, ಅಧ್ಯಕ್ಷ ಅಥವಾ ಸದಸ್ಯನನ್ನು ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಅವನಿಗೆ ಒಂದು ಅವಕಾಶವನ್ನು ಕೊಟ್ಟ ಹೊರತು, ಅವನು ಸದರಿ ಪ್ರಕರಣದ (1)ನೇ ಉಪ–ಪ್ರಕರಣದ (ಇ) ಖಂಡದಲ್ಲಿ ಹೇಳಲಾದ ಅನರ್ಹತೆಗೆ ಒಳಗಾಗಿದ್ದಾನೆಂಬ ಕಾರಣದ ಮೇಲೆ ತೆಗೆದುಹಾಕತಕ್ಕದ್ದಲ್ಲ ; ಅಥವಾ

(ಬಿ) ಅವನು ಕಾರ್ಯವನ್ನು ನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯವನ್ನು ನಿರ್ವಹಿಸಲು ಅಸಮರ್ಥನಾದರೆ ; ಅಥವಾ

(ಸಿ) ಗೈರು ಹಾಜರಾಗಲು ಪ್ರಾಧಿಕಾರದಿಂದ ಅನುಮತಿ ಪಡೆಯದೆ ಪ್ರಾಧಿಕಾರದ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದರೆ : ಅಥವಾ

(ಡಿ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ತನ್ನ ಸ್ಥಾನವನ್ನು ಅವನು ದುರುಪಯೋಗ ಪಡಿಸಿಕೊಂಡಿದ್ದು, ಅವನನ್ನು ಆ ಪದದಲ್ಲಿ ಮುಂದುವರಿಸಿದರೆ ಸಾರ್ವಜನಿಕ ಹಿತಾಸಕ್ತಿಗೆ ಬಾಧಕ ಉಂಟಾಗುವುದೆಂದು ಕಂಡುಬಂದರೆ,

– ಸದಸ್ಯತ್ವದಿಂದ ಅವನನ್ನು ತೆಗೆದು ಹಾಕತಕ್ಕದ್ದು:

ಪರಂತು ಯಾವೊಬ್ಬ ಸದಸ್ಯರನ್ನು ಅವರಿಗೆ ಅಂಥ ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಒಂದು ಅವಕಾಶವನ್ನು ಕೊಟ್ಟ ಹೊರತು, ಈ ಖಂಡದ ಮೇರೆಗೆ ತೆಗೆದುಹಾಕತಕ್ಕದ್ದಲ್ಲ.

**7. ಕಾರ್ಯದರ್ಶಿ.**– (1) ರಾಜ್ಯ ಸರ್ಕಾರವು, ಗ್ರೂಪ್ – ಎ ದರ್ಜೆಗೆ ಕಡಿಮೆಯಿಲ್ಲದ ಒಬ್ಬ ಅಧಿಕಾರಿಯನ್ನು ಪ್ರಾಧಿಕಾರದ ಕಾರ್ಯದರ್ಶಿಯಾಗಿ ನೇಮಕ ಮಾಡತಕ್ಕದ್ದು. ಕಾರ್ಯದರ್ಶಿಯು ರಾಜ್ಯ ಸರ್ಕಾರವು ಆಗಿಂದಾಗ್ಗೆ ನಿರ್ಧರಿಸಬಹುದಾದಂಥ ವೇತನ ಮತ್ತು ಇತರ ಭತ್ಯೆಗಳನ್ನು ಪಡೆಯತಕ್ಕದ್ದು.

(2) ರಾಜ್ಯ ಸರ್ಕಾರವು, ಕಾಲಕಾಲಕ್ಕೆ ಕಾರ್ಯದರ್ಶಿಯವರಿಗೆ ರಜೆಗಳನ್ನು ಮಂಜೂರು ಮಾಡಬಹುದು.

(3) ಕಾರ್ಯದರ್ಶಿಯು ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಾಹಕರಾಗಿರತಕ್ಕದ್ದು;

(ಎ) ಪ್ರಾಧಿಕಾರದಿಂದ ಅನುಮೋದಿತವಾದ ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರನಾಗಿರತಕ್ಕದ್ದು;

(ಬಿ) ಪ್ರಾಧಿಕಾರದ ನಿಧಿಯನ್ನು ನಿರ್ವಹಿಸತಕ್ಕದ್ದು;

(ಸಿ) ಪ್ರಾಧಿಕಾರದ ಲೆಕ್ಕಪತ್ರಗಳನ್ನು ಇಟ್ಟುಕೊಂಡು ಬರುವಂತೆ ಮಾಡತಕ್ಕದ್ದು ;

(ಡಿ) ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ಅವನಿಗೆ ಪ್ರದಾನ ಮಾಡಲಾಗಿರುವಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು ; ಮತ್ತು

(ಇ) ಅಧ್ಯಕ್ಷರು ತಪಾಸಣೆ ಮಾಡುವ ಸಮಯದಲ್ಲಿ, ಕಚೇರಿಯ ದಾಖಲೆಗಳನ್ನು ಹಾಜರುಪಡಿಸಲು ಜವಾಬ್ದಾರನಾಗಿರತಕ್ಕದ್ದು.

**8. ಪ್ರಾಧಿಕಾರದ ಅಧಿಕಾರಿಗಳು ಮತ್ತು ಅವರ ಸೇವಾ ಷರತ್ತುಗಳು.–** (1) ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು ರಾಜ್ಯ ಸರ್ಕಾರವು ಅಥವಾ ರಾಜ್ಯ ಸರ್ಕಾರವು ಪ್ರಾಧಿಕೃತಗೊಳಿಸಬಹುದಾದಂಥ ಇತರ ಅಧಿಕಾರಿಯು ಪ್ರಾಧಿಕಾರವು ಅದರ ಪ್ರಕಾರ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಅವಶ್ಯವೆಂದು ಭಾವಿಸಬಹುದಾದಂಥ ಇತರ ಅಧಿಕಾರಿಗಳನ್ನು ಮತ್ತು ನೌಕರರನ್ನು ನೇಮಕ ಮಾಡಬಹುದು ಅಥವಾ ಪ್ರತಿನಿಯೋಜಿಸಬಹುದು.

(2) ಮೇಲೆ ನಿರ್ದಿಷ್ಟಪಡಿಸಲಾದ ಅಧಿಕಾರಿಗಳ ಮತ್ತು ನೌಕರರ ಆಯ್ಕೆ ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾದಂಥವುಗಳಾಗಿರತಕ್ಕದ್ದು.

**9. ಪ್ರಾಧಿಕಾರದ ಸಭೆಗಳು.– (1)** ಪ್ರಾಧಿಕಾರದ ಸಭೆಗಳನ್ನು ಅಧ್ಯಕ್ಷರು ಅಥವಾ ಅಧ್ಯಕ್ಷರ ಪೂರ್ವಾನುಮತಿ ಪಡೆದು ಕಾರ್ಯದರ್ಶಿಯು ಕರೆಯತಕ್ಕದ್ದು ಮತ್ತು ಅವು ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯೊಳಗೆ ಬರುವ ಯಾವುದೇ ಸ್ಥಳದಲ್ಲಿ ನಡೆಸತಕ್ಕದ್ದು.

(2) ಪ್ರಾಧಿಕಾರವು ಕಡೇ ಪಕ್ಷ ಎರಡು ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು.

(3) ಅಧ್ಯಕ್ಷರು ವಿಶೇಷ ಸಭೆಯನ್ನು ಕರೆಯುವುದು ಅವಶ್ಯವೆಂದು ಭಾವಿಸಿದರೆ ಅಧ್ಯಕ್ಷರು ಅಥವಾ ಅಧ್ಯಕ್ಷರ ಪೂರ್ವಾನುಮತಿ ಪಡೆದು ಕಾರ್ಯದರ್ಶಿಯು ಅಂಥ ಸಭೆಯನ್ನು ಕರೆಯಬಹುದು.

(4) ಪ್ರಾಧಿಕಾರವು ತನ್ನ ಸಭೆಗಳಲ್ಲಿ ಕಾರ್ಯಕಲಾಪದ ಸಂಬಂಧದಲ್ಲಿ ವಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬಹುದಾದಂಥ ಕಾರ್ಯವಿಧಾನದ ನಿಯಮಗಳನ್ನು ಅನುಸರಿಸತಕ್ಕದ್ದು.

(5) ಅಧ್ಯಕ್ಷರು ಪ್ರತಿಯೊಂದು ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಯಾವುದೇ ಕಾರಣದಿಂದ ಅಧ್ಯಕ್ಷರಿಗೆ ಯಾವುದೇ ಸಭೆಯಲ್ಲಿ ಭಾಗವಹಿಸಲು ಸಾಧ್ಯವಾಗದಿದ್ದರೆ, ಸಭೆಯಲ್ಲಿ ಹಾಜರಿದ್ದ ಸದಸ್ಯರ ಪೈಕಿ ಆರಿಸಲ್ಪಟ್ಟ ಯಾವುದೇ ಇತರ ಸದಸ್ಯರು ಸಭೆಯಲ್ಲಿ ಅಧ್ಯಕ್ಷತೆ ವಹಿಸತಕ್ಕದು.

(6) ಗಣಪೂರ್ತಿ (ಕೋರಂ) ಆಗಲು ಒಂಬತ್ತು ಜನ ಸದಸ್ಯರಿರತಕ್ಕದ್ದು.

**10. ವ್ಯವಹರಣೆಗಳು ಸರಿಯಾಗಿವೆ ಮತ್ತು ಸಿಂಧುವಾಗಿವೆ ಎಂಬ ಪೂರ್ವಭಾವನೆ.–** ಪ್ರಾಧಿಕಾರದ ಯಾವುದೇ ಕ್ರಮ ಅಥವಾ ವ್ಯವಹರಣೆ ಅನ್ಯಥಾ ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಇರುವಾಗ ಅಂಥ ಕ್ರಮ ಅಥವಾ ವ್ಯವಹರಣೆಯು ಅಧ್ಯಕ್ಷರು ಅಥವಾ ಸದಸ್ಯನಾಗಿ ಕೆಲಸ ಮಾಡುತ್ತಿರುವ ಯಾವುದೇ ವ್ಯಕ್ತಿಯ ಅನರ್ಹತೆಯ ಕಾರಣದಿಂದ ಅಥವಾ ನೇಮಕಾತಿಯಲ್ಲಿನ ದೋಷದ ಕಾರಣದಿಂದ ದೋಷಪೂರಿತವಾಗುತ್ತದೆ ಎಂದು ಭಾವಿಸತಕ್ಕದ್ದಲ್ಲ.

**11. ಉಪ ಸಮಿತಿ.–** ಪ್ರಾಧಿಕಾರವು ಯಾವುದೇ ನಿರ್ದಿಷ್ಟ ಉದ್ದೇಶಕ್ಕಾಗಿ ತನ್ನ ಸದಸ್ಯರ ಪೈಕಿಯಿಂದ ಆರು ಜನರನ್ನು ಮೀರದಷ್ಟು ಸಂಖ್ಯೆಯ ಸದಸ್ಯರಿರುವ ಒಂದು ಉಪ ಸಮಿತಿಯನ್ನು ರಚಿಸಬಹುದು. ಪ್ರಾಧಿಕಾರದ ಅಧ್ಯಕ್ಷರು ಈ ಉಪಸಮಿತಿಯ ಅಧ್ಯಕ್ಷರು ಸಹ ಆಗಿರತಕ್ಕದ್ದು.

**12. ಉಪ ಸಮಿತಿಯ ಅಧಿಕಾರಗಳು ಮತ್ತು ಕರ್ತವ್ಯಗಳು.– (1)**ಉಪಸಮಿತಿಯು, ಪ್ರಾಧಿಕಾರವು ತನಗೆ ಪ್ರತ್ಯಾಯೋಜಿಸಲಾದಂಥ ಪ್ರಾಧಿಕಾರದ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

(2) ಉಪ ಸಮಿತಿಯು ಕಡೇಪಕ್ಷ ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು.

(3) ಉಪಸಮಿತಿಯು, ಪ್ರಾಧಿಕಾರದ ನಿರ್ಧಾರಗಳನ್ನು ಸೂಕ್ತವಾಗಿ ಕಾರ್ಯಗತ ಗೊಳಿಸಲಾಗುತ್ತಿದೆಯೇ ಎಂಬ ಬಗ್ಗೆ ಪರಿಶೀಲಿಸಿ ನೋಡಲು ತುರ್ತು ಸ್ವರೂಪದ ವಿಷಯಗಳ ಬಗ್ಗೆ ಅಗತ್ಯ ನಿರ್ಧಾರ ಕೈಗೊಳ್ಳತಕ್ಕದ್ದು ಮತ್ತು ರಾಜ್ಯ ಸರ್ಕಾರವು ತುರ್ತು ವಿಷಯದ ಬಗ್ಗೆ ಕ್ರಮಕೈಗೊಳ್ಳಲು ಸಲಹೆ ನೀಡತಕ್ಕದ್ದು.

(4) ಉಪ ಸಮಿತಿಯು, ತನ್ನ ಸಭೆಗಳಲ್ಲಿ ಕಾರ್ಯನಿರ್ವಹಣೆಯ ಸಂಬಂಧದಲ್ಲಿ, ವಿನಿಯಮಗಳ ಮೂಲಕ ಉಪಬಂಧಿಸಬಹುದಾದಂಥ ಕಾರ್ಯವಿಧಾನದ ನಿಯಮಗಳನ್ನು ಅನುಸರಿಸತಕ್ಕದ್ದು.

**13. ತಜ್ಞರ ಸೇವೆಗಳನ್ನು ಪಡೆದುಕೊಳ್ಳುವುದು.–** (1) ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವ ಸಲುವಾಗಿ, ಪ್ರಾಧಿಕಾರವು ಅವಶ್ಯವಾದರೆ, ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಧಾನದಲ್ಲಿ ತಜ್ಞರ ಸೇವೆಗಳನ್ನು ಅಥವಾ ನೆರವನ್ನು ಪಡೆದುಕೊಳ್ಳಬಹುದು.

(2) ಅಂಥ ತಜ್ಞರು ಸಲ್ಲಿಸಿದ ಸೇವೆ ಅಥವಾ ನೆರವಿನ ಬಗ್ಗೆ ಸಂಧಾಯಮಾಡತಕ್ಕ ಗೌರವಧನ ಮತ್ತು ಭತ್ಯೆಗಳು, ನಿಯಮಗಳಲ್ಲಿ ಗೊತ್ತುಪಡಿಸಬಹುದಾದಂಥ ಮೊಬಲಾಗಿರತಕ್ಕದ್ದು.

## ಅಧ್ಯಾಯ – III

**14. ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಸಿದ್ಧಪಡಿಸುವುದು.–** (1) ಪ್ರಾಧಿಕಾರವು, ಪ್ರತಿವರ್ಷವೂ, ಗಡಿ ಪ್ರದೇಶಗಳ ಅಭಿವೃದ್ಧಿಗಾಗಿ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ಅನುಮೋದನೆಗಾಗಿ ಕಳುಹಿಸತಕ್ಕದ್ದು. ರಾಜ್ಯ ಸರ್ಕಾರವು ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ಮಾರ್ಪಾಟನ್ನು ಮಾಡಿ ಅಥವಾ ಮಾರ್ಪಾಟಿಲ್ಲದೆ ಅನುಮೋದಿಸಬಹುದು.

**15. ಪ್ರಾಧಿಕಾರದ ಪ್ರಕಾರ್ಯಗಳು.–** ಪ್ರಾಧಿಕಾರವು, ಕೆಳಕಂಡ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು:–

(1) ಗಡಿ ಪ್ರದೇಶದಲ್ಲಿ ಅಭಿವೃದ್ಧಿ ಕಾರ್ಯಗಳ ಅನುಷ್ಠಾನ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಾಡುವುದು. ಇದಲ್ಲದೆ, ನೆರೆಹೊರೆಯ ರಾಜ್ಯದ ಗಡಿ ಭಾಗಗಳಲ್ಲಿ ಕನ್ನಡ ಮಾತನಾಡುವ ಜನರ ಶೈಕ್ಷಣಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತಿಯನ್ನು ಸುಧಾರಿಸುವುದು.

(2) ರಾಜ್ಯದ ಹೊರಭಾಗದ ಗಡಿಯಲ್ಲಿ ಅವಶ್ಯವಿರುವಷ್ಟು ಕನ್ನಡ ಶಾಲೆಗಳನ್ನು ತೆರೆಯಲು ಸಹಾಯ ಒದಗಿಸುವುದು. ನೆರೆ ರಾಜ್ಯದವರು ಕನ್ನಡ ಶಾಲೆಗಳನ್ನು ಮುಚ್ಚಿರುವಂತಹ ಗ್ರಾಮಗಳಲ್ಲಿ ಕನ್ನಡಿಗರಿಗೆ ಕನ್ನಡ ಮಾಧ್ಯಮದ ಮೂಲಕ ಶಿಕ್ಷಣ ನೀಡಲು ಕನ್ನಡ ಮಾಧ್ಯಮದ ಶಾಲೆಗಳನ್ನು ತೆರೆಯುವುದು. ಶಾಲಾ ಕಟ್ಟಡಗಳನ್ನು ನಿರ್ಮಾಣ ಮಾಡುವುದು.

(3) ಗಡಿ ಪ್ರದೇಶದಲ್ಲಿ ಕನ್ನಡದಲ್ಲಿ ಶಿಕ್ಷಣ ನೀಡುವುದಕ್ಕೆ ಅವಶ್ಯವಾದ ಶಿಕ್ಷಕರನ್ನು ನೇಮಕ ಮಾಡಲು ಸಹಾಯ ಮಾಡುವುದು. ಕನ್ನಡದಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ಕನ್ನಡ ಮಾಧ್ಯಮದ ಪಠ್ಯ ಪುಸ್ತಕಗಳನ್ನು ಕಾಲಕಾಲಕ್ಕೆ ಒದಗಿಸುವುದು.

(4) ಕನ್ನಡಿಗರಿಗೆ–ಕನ್ನಡ ಭಾಷೆಯಲ್ಲಿ ದೈನಂದಿನ ಬೆಳವಣಿಗೆಗಳ ಬಗ್ಗೆ ತಿಳಿದುಕೊಳ್ಳಲು –ಕನ್ನಡ ವೃತ್ತ ಪತ್ರಿಕೆಗಳು, ಮಾಸ ಪತ್ರಿಕೆಗಳು, ವಾರ ಪತ್ರಿಕೆಗಳು ಆ ಭಾಗಗಳಲ್ಲಿ ದೊರಕುವಂತೆ ಮಾಡಲು ಗ್ರಂಥಾಲಯಗಳನ್ನು ಗಡಿ ಭಾಗಗಳಲ್ಲಿ ಪ್ರಾರಂಭ ಮಾಡುವುದು.

(5) ಕನ್ನಡ ಭಾಷೆ ಬೆಳವಣಿಗೆ ದೃಷ್ಟಿಯಿಂದ ನೋಂದಣಿಯಾದ ಕನ್ನಡಪರ ಸಂಘಟನೆಗಳಿಗೆ – ವಾರ್ಷಿಕವಾಗಿ ಭಾಷಾ ಚಟುವಟಿಕೆಗಳನ್ನು ನಡೆಸಲು ಅನುದಾನ ನೀಡುವುದು.

(6) ಗಡಿ ಪ್ರದೇಶದಲ್ಲಿ ಕನ್ನಡಪರ ಸಂಘಟನೆಗಳು ಕನ್ನಡಪರವಾಗಿ ಕ್ರಿಯಾಶೀಲರಾಗಿ ಕೆಲಸ ಮಾಡುವಂತೆ ಮಾಡುವ ಉದ್ದೇಶದಿಂದ ಹೆಚ್ಚು ಹೆಚ್ಚು ಸಂಘಗಳನ್ನು ಗಡಿ ಭಾಗಗಳಲ್ಲಿ ಕಟ್ಟಲು ಮತ್ತು ಈ ಸಂಘಟನೆಗಳು ಭಾಷಾ ಉಪನ್ಯಾಸ ಮಾಲಿಕೆಗಳನ್ನು ಸಂಘಟಿಸಲು ಸಹಾಯ ಮಾಡುವ ದೃಷ್ಟಿಯಿಂದ ಪ್ರಚಾರ ಉಪನ್ಯಾಸ ಕಾರ್ಯಕ್ರಮಗಳನ್ನು ನಡೆಸುವುದು.

(7) ಸಾಂಸ್ಕೃತಿಕ ಚಟುವಟಿಕೆಗಳನ್ನು ಗಡಿ ಪ್ರದೇಶಗಳಲ್ಲಿ ಹಮ್ಮಿಕೊಂಡು, ಗಡಿ ಕನ್ನಡಿಗರ ಸಾಂಸ್ಕೃತಿಕ ಅವಶ್ಯಕತೆಗಳನ್ನು ಪೂರೈಸುವುದು.

(8) ಕನ್ನಡ ಸಾಹಿತ್ಯ, ಚಲನಚಿತ್ರ, ನಾಟಕ, ಜಾನಪದ, ನೃತ್ಯ, ಯಕ್ಷಗಾನ, ಲಾವಣಿ, ಬಯಲಾಟ, ತೊಗಲುಬೊಂಬೆ ಆಟ, ಹರಿಕಥೆ, ಸಂಗೀತ, ಇತ್ಯಾದಿ ಕಲೆಗಳು ನಶಿಸಿಹೋಗದಂತೆ ಪ್ರದರ್ಶನಕ್ಕೆ ಸೂಕ್ತವಾದ ವೇದಿಕೆಗಳನ್ನು ಕಲ್ಪಿಸುವುದು. ರಾಜ್ಯದ ಗಡಿ ಭಾಗದ ತಾಲ್ಲೂಕುಗಳು ಹಾಗೂ ಗ್ರಾಮಗಳ ಕನ್ನಡಿಗರು ಹೊರ ರಾಜ್ಯಗಳ ಕನ್ನಡಿಗರಿಗೆ ಈ ಕಲೆಗಳನ್ನು ಪ್ರದರ್ಶಿಸಲು ಸಾಂಸ್ಕೃತಿಕ ಭವನಗಳನ್ನು ಕಟ್ಟುವುದು.

(9) ಗಡಿ ಪ್ರದೇಶ ಹಾಗೂ ಹೊರನಾಡು ಉತ್ಸವಗಳನ್ನು ಹಮ್ಮಿಕೊಳ್ಳುವುದು, ಕನ್ನಡ ಭವನಗಳನ್ನು ಕಟ್ಟುವುದು, ಗಡಿ ಪ್ರದೇಶದ ಜನರ ಪರಿಸ್ಥಿತಿಯನ್ನು ಸುಧಾರಿಸಲು ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದು, ಅವರ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಆಶೆ ಆಕಾಂಕ್ಷೆಗಳನ್ನು ಈಡೇರಿಸುವುದು.

(10) ಗಡಿ ಪ್ರದೇಶದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನತೆಯ ಜೀವನ ಭದ್ರತೆಯ ದೃಷ್ಟಿಯಿಂದ ನೀಡಬಹುದಾದ ಸೌಲಭ್ಯಗಳ ಬಗ್ಗೆ ಅಧ್ಯಯನ ಮಾಡಿ ಸಂಬಂಧಿತ ಇಲಾಖೆಗಳ ಮೂಲಕ ನೆರವು ನೀಡುವುದು

(11) ಗಡಿ ಪ್ರದೇಶಗಳಲ್ಲಿ ಕರಕುಶಲ ಕೈಗಾರಿಕೆ, ಗುಡಿ ಕೈಗಾರಿಕೆ ಹಾಗೂ ಇತರೆ ಉದ್ಯಮಗಳಿಗೆ ಪ್ರೋತ್ಸಾಹದಾಯಕ ಕ್ರಮ ಕೈಗೊಳ್ಳುವುದು.

(12) ಗಡಿ ಪ್ರದೇಶದ ಹಳ್ಳಿಗಳಿಗೆ ಕುಡಿಯುವ ನೀರು, ಆರೋಗ್ಯ, ವ್ಯವಸಾಯ, ನೀರಾವರಿ, ರಸ್ತೆ, ಮುಂತಾದ ಅಭಿವೃದ್ಧಿ ಕೆಲಸಗಳಿಗೆ ಅಗತ್ಯವಾದ ಸೌಲಭ್ಯಗಳನ್ನು ಆಯಾಯ ಇಲಾಖೆಗಳು ಒದಗಿಸುವುದನ್ನು ಮೇಲ್ವಿಚಾರಣೆ ಮಾಡುವುದು.

**16. ಅಧಿನಿಯಮದ ಉದ್ದೇಶಗಳನ್ನು ಅನುಷ್ಠಾನಗೊಳಿಸುವುದು.–** ಪ್ರಾಧಿಕಾರವು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿ, ಉಪ ವಿಭಾಗ ಮಟ್ಟದಲ್ಲಿ ಉಪ ವಿಭಾಗಾಧಿಕಾರಿ ಮತ್ತು ತಾಲ್ಲೂಕು ಮಟ್ಟದಲ್ಲಿ ತಹಶೀಲ್ದಾರ್ ಇವರ ಮೂಲಕ ಅಧಿನಿಯಮದ ಉದ್ದೇಶಗಳನ್ನು ಅನುಷ್ಠಾನಗೊಳಿಸತಕ್ಕದ್ದು.

**17. ಮಾಹಿತಿ ಪಡೆದುಕೊಳ್ಳುವುದು.–** ಪ್ರಾಧಿಕಾರವು ಈ ಅಧಿನಿಯಮದ ಉದ್ದೇಶಗಳಿಗಾಗಿ ರಾಜ್ಯ ಸರ್ಕಾರದ ಯಾವ ಅಧಿಕಾರಿಯಿಂದಲಾದರೂ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಕೋರಬಹುದು ಮತ್ತು

ಪಡೆದುಕೊಳ್ಳಬಹುದು ಮತ್ತು ಅಂಥ ಅಧಿಕಾರಿಯು ಪ್ರಾಧಿಕಾರವು ಕೋರಬಹುದಾದ ಮಾಹಿತಿಯನ್ನು ಒದಗಿಸಲು ಬದ್ಧನಾಗಿರತಕ್ಕದ್ದು.

**18. ಪ್ರಾಧಿಕಾರದ ಸಲಹೆಗಳು.–** ಪ್ರಾಧಿಕಾರವು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವ ಸಲುವಾಗಿ ತನ್ನ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವ ಬಗ್ಗೆ ರಾಜ್ಯ ಸರ್ಕಾರಕ್ಕೆ ಸಲಹೆಗಳನ್ನು ನೀಡಬಹುದು.

**19. ಕರ್ತವ್ಯ ಲೋಪವನ್ನು ದಾಖಲಿಸುವ ಮತ್ತು ನೇಮಕಾತಿ ಪ್ರಾಧಿಕಾರಕ್ಕೆ ತಿಳಿಸುವ ಅಧಿಕಾರ.–** ಪ್ರಾಧಿಕಾರವು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವ ಸಲುವಾಗಿ, ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಅಥವಾ ಈಗಾಗಲೇ ಜಾರಿಯಲ್ಲಿರುವ ಯಾವುದೇ ಅದೇಶವನ್ನು ರಾಜ್ಯ ಸರ್ಕಾರ ಮತ್ತು ಸ್ಥಳೀಯ ನಿಕಾಯಗಳ ಅಧಿಕಾರಿಗಳು ಮತ್ತು ನೌಕರರು ಉಲ್ಲಂಘಿಸಿದರೆ, ಅಂಥ ಉಲ್ಲಂಘನೆಯನ್ನು ಕರ್ತವ್ಯ ಲೋಪವೆಂದು ದಾಖಲಿಸತಕ್ಕದ್ದು ಮತ್ತು ಅಂಥ ವ್ಯಕ್ತಿಗಳ ವಿರುದ್ಧ ಅಗತ್ಯ ಕ್ರಮ ಕೈಗೊಳ್ಳುವಂತೆ ನೇಮಕಾತಿ ಪ್ರಾಧಿಕಾರಕ್ಕೆ ಸಲಹೆಗಳನ್ನು ನೀಡತಕ್ಕದ್ದು.

## ಅಧ್ಯಾಯ – IV

**20. ಪ್ರಾಧಿಕಾರದ ನಿಧಿ.–** (1) ಪ್ರಾಧಿಕಾರವು, ಪ್ರಾಧಿಕಾರದ ನಿಧಿಯೆಂದು ಕರೆಯಲಾಗುವ ಒಂದು ನಿಧಿಯನ್ನು ಹೊಂದಿರತಕ್ಕದು.

(2) ಈ ಮುಂದಿನವುಗಳು ಪ್ರಾಧಿಕಾರದ ನಿಧಿಯ ಒಂದು ಭಾಗವಾಗಿರತಕ್ಕದ್ದು ಅಥವಾ ಪ್ರಾಧಿಕಾರದ ನಿಧಿಗೆ ಸಂದಾಯವಾಗತಕ್ಕದ್ದು, ಎಂದರೆ:–

(i) ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಯಾವುದೇ ಸ್ಥಳೀಯ ಪ್ರಾಧಿಕಾರ, ನಿಗಮಿತವಾದ ಅಥವಾ ನಿಗಮಿತವಾಗಿರದ ಯಾವುದೇ ನಿಕಾಯ ಅಥವಾ ಯಾರೇ ವ್ಯಕ್ತಿಗಳು ಮಾಡುವ ಎಲ್ಲ ಅನುದಾನಗಳು, ಧನಸಹಾಯಗಳು, ದಾನಗಳು ಮತ್ತು ಕೊಡುಗೆಗಳು ; ಮತ್ತು

(ii) ಯಾವುದೇ ರೀತಿಯ ಯಾವುದೇ ಮೂಲದಿಂದ ಪ್ರಾಧಿಕಾರದಿಂದ ಅಥವಾ ಅದರ ಪರವಾಗಿ ಸ್ವೀಕರಿಸಲಾದ ಇತರ ಎಲ್ಲ ಮೊತ್ತಗಳು :

(3) ರಾಜ್ಯ ಸರ್ಕಾರವು ಅನ್ಯಥಾ ನಿರ್ದೇಶಿಸಿದ ಹೊರತು, ನಿಧಿಗೆ ಜಮೆ ಮಾಡಲಾದ ಎಲ್ಲ ಹಣವನ್ನು ಯಾವುದೇ ಅನುಸೂಚಿತ ಬ್ಯಾಂಕಿನಲ್ಲಿ ಹೂಡತಕ್ಕದ್ದು.

(4) ಪ್ರಾಧಿಕಾರದ ಕಾರ್ಯದರ್ಶಿ ಮತ್ತು ಅದರ ಅಧಿಕಾರಿಗಳು ಮತ್ತು ನೌಕರರಿಗೆ ಸಂದಾಯವಾಗತಕ್ಕ ವೇತನಗಳು, ಭತ್ಯೆಗಳು ಮತ್ತು ನಿವೃತ್ತಿ ವೇತನಗಳೂ ಸೇರಿದಂತೆ ಪ್ರಾಧಿಕಾರದ ಆಡಳಿತಾತ್ಮಕ ವೆಚ್ಚಗಳನ್ನು ಪ್ರಾಧಿಕಾರದ ನಿಧಿಯಿಂದ ಭರಿಸತಕ್ಕದ್ದು.

**21. ಯೋಜನೆ ಮತ್ತು ಕಾರ್ಯಕ್ರಮಗಳಿಗಾಗಿ ಹಂಚಿಕೆ.–** ರಾಜ್ಯ ಸರ್ಕಾರವು ಪ್ರಾಧಿಕಾರದ ಯೋಜನೆ ಮತ್ತು ಕಾರ್ಯಕ್ರಮಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯದ ವಾರ್ಷಿಕ ಬಜೆಟ್ಟಿನಲ್ಲಿ ಪ್ರಾಧಿಕಾರಕ್ಕೆ ಹಣಕಾಸಿನ ಹಂಚಿಕೆಗಳನ್ನು ಮಾಡಬಹುದು.

**22. ರಾಜ್ಯ ಸರ್ಕಾರದಿಂದ ಅನುದಾನ.–** ರಾಜ್ಯ ಸರ್ಕಾರವು ಪ್ರತಿ ವರ್ಷ ಪ್ರಾಧಿಕಾರದ ಆಡಳಿತಾತ್ಮಕ ವೆಚ್ಚಗಳಿಗೆ ಸಮನಾದ ಮೊಬಲಗನ್ನು ಪ್ರಾಧಿಕಾರಕ್ಕೆ ಅನುದಾನವಾಗಿ ನೀಡಬಹುದು.

**23. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಪ್ರಾಧಿಕಾರದ ನಿಧಿಯ ಆದಾಯ ಮತ್ತು ವೆಚ್ಚದ ಲೆಕ್ಕಪತ್ರಗಳನ್ನು ಗೊತ್ತುಪಡಿಸಬಹುದಾದಂಥ ನಿಯಮಗಳ ಅನುಸಾರವಾಗಿ ಇಡತಕ್ಕದ್ದು;

(2) ಪ್ರಾಧಿಕಾರವು ಗೊತ್ತುಪಡಿಸಬಹುದಾದಂಥ ಪ್ರಪತ್ರದಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರಣಾ ಪಟ್ಟಿಯನ್ನು ತಯಾರಿಸತಕ್ಕದ್ದು.

(3) ರಾಜ್ಯ ಸರ್ಕಾರವು ನೇಮಕ ಮಾಡಬಹುದಾದಂಥ ಲೆಕ್ಕ ಪರಿಶೋಧಕರಿಂದ ಪ್ರಾಧಿಕಾರದ ಲೆಕ್ಕಪತ್ರಗಳ ವಾರ್ಷಿಕ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(4) ಲೆಕ್ಕ ಪರಿಶೋಧಕರು ಲೆಕ್ಕ ಪರಿಶೋಧನೆಯ ಉದ್ದೇಶಗಳಿಗಾಗಿ ಪ್ರಾಧಿಕಾರದ ಎಲ್ಲ ಲೆಕ್ಕಪತ್ರಗಳನ್ನು ಮತ್ತು ಇತರ ದಾಖಲೆಗಳನ್ನು ನೋಡುವ ಅಧಿಕಾರ ಹೊಂದಿರತಕ್ಕದ್ದು.

(5) ಪ್ರಾಧಿಕಾರವು, ಲೆಕ್ಕ ಪರಿಶೋಧನೆಗಾಗಿ ಗೊತ್ತುಪಡಿಸಬಹುದಾದಂಥ ವೆಚ್ಚಗಳನ್ನು ತನ್ನ ನಿಧಿಯಿಂದ ಸಂದಾಯ ಮಾಡತಕ್ಕದ್ದು.

(6) ಲೆಕ್ಕ ಪರಿಶೋಧಕರ ವರದಿಯನ್ನು ಸ್ವೀಕರಿಸಿದ ತರುವಾಯ ಸಾಧ್ಯವಾದಷ್ಟು ಬೇಗ, ಪ್ರಾಧಿಕಾರವು ಲೆಕ್ಕ ಪರಿಶೋಧಕರ ವರದಿಯ ಒಂದು ಪ್ರತಿಯೊಂದಿಗೆ ಲೆಕ್ಕಪತ್ರಗಳ ವಾರ್ಷಿಕ ವಿವರಣಾಪಟ್ಟಿಯ ಪ್ರತಿಯೊಂದನ್ನು ಸರ್ಕಾರಕ್ಕೆ

ಕಳುಹಿಸತಕ್ಕದ್ದು ಮತ್ತು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರಣಾ ಪಟ್ಟಿಯನ್ನು ಪ್ರಕಟಿಸುವಂತೆ ಮಾಡತಕ್ಕದ್ದು.

(7) ರಾಜ್ಯ ಸರ್ಕಾರವು, ಲೆಕ್ಕ ಪರಿಶೋಧಕರ ವರದಿಯನ್ನು ಪರಿಶೀಲಿಸಿದ ತರುವಾಯ ತಾನು ಸೂಕ್ತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ಪ್ರಾಧಿಕಾರಕ್ಕೆ ನೀಡಬಹುದು ಮತ್ತು ಪ್ರಾಧಿಕಾರವು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

## ಅಧ್ಯಾಯ – V

## ಸಂಕೀರ್ಣ

**24. ವರದಿ.–** ಪ್ರಾಧಿಕಾರವು, ನಿಯಮಿಸಬಹುದಾದಂಥ ದಿನಾಂಕಗಳ ಒಳಗೆ ಅಂಥ ರೀತಿಯಲ್ಲಿ ಮತ್ತು ಅಂಥ ಕಾಲಾಂತರಗಳಲ್ಲಿ ನಿಯಮಿಸಬಹುದಾದ ವರದಿಯನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**25. ಪ್ರಾಧಿಕಾರದ ಆಯವ್ಯಯ.–** ಪ್ರಾಧಿಕಾರವು ಪ್ರತಿವರ್ಷ, ಮುಂದಿನ ಏಪ್ರಿಲ್ ತಿಂಗಳ ಮೊದಲನೇ ದಿನಾಂಕದಿಂದ ಪ್ರಾರಂಭವಾಗುವ ಹಣಕಾಸು ವರ್ಷಕ್ಕಾಗಿ ತನ್ನ ಆದಾಯ ಮತ್ತು ವೆಚ್ಚದ ಅಂದಾಜನ್ನು ನಿಯಮಿಸಬಹುದಾದಂಥ ದಿನಾಂಕದಂದು ಮತ್ತು ಅಂಥ ಪ್ರಪತ್ರದಲ್ಲಿ ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

**26. ನಿಯಮಗಳ ರಚನಾಧಿಕಾರ.– (1)** ರಾಜ್ಯ ಸರ್ಕಾರವು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲವು ಅಧಿವೇಶನದಲ್ಲಿರುವಾಗ ಅದರ ಪ್ರತಿಯೊಂದು ಸದನದ ಮುಂದೆ ಒಂದು ಅಥವಾ ಎರಡು ಅಥವಾ ಅದಕ್ಕೂ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ಅದರ ನಿಕಟ ತರುವಾಯದ ಅಧಿವೇಶನ ಮುಕ್ತಾಯವಾಗುವ ಮೊದಲು ಉಭಯ ಸದನಗಳೂ ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಬೇಕೆಂದು ಒಪ್ಪಿದರೆ ಅಥವಾ ಯಾವುದೇ ನಿಯಮ ರಚಿಸಬಾರದೆಂದು ನಿರ್ಧರಿಸಿದರೆ ಆ ತರುವಾಯ, ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದು ಅಥವಾ ಯಾವುದೇ ಪರಿಣಾಮ ಹೊಂದತಕ್ಕದ್ದಲ್ಲ. ಆದರೆ ಅಂಥ ಯಾವುದೇ ಮಾರ್ಪಾಟು ಅಥವಾ ರದ್ಧತಿಯು ಆ ನಿಯಮದ ಅಡಿಯಲ್ಲಿ ಆ ಮೊದಲು ಮಾಡಿದ ಯಾವುದೇ ಕೃತ್ಯದ ಮಾನ್ಯತೆಗೆ ಬಾಧಕವಾಗತಕ್ಕದ್ದಲ್ಲ.

**27. ವಿನಿಯಮಗಳನ್ನು ರಚಿಸಲು ಪ್ರಾಧಿಕಾರದ ಅಧಿಕಾರ.–** ಪ್ರಾಧಿಕಾರವು ಈ ಅಧಿನಿಯಮದ ಉಪಬಂಧಗಳಿಗೆ ಮತ್ತು 26ನೇ ಪ್ರಕರಣದ ಮೇರೆಗೆ ಮಾಡಲಾದ ನಿಯಮಗಳಿಗೆ ಒಳಪಟ್ಟು ಮತ್ತು ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ಅಧಿಸೂಚನೆಯ ಮೂಲಕ ವಿನಿಯಮಗಳನ್ನು ರಚಿಸಬಹುದು.

## ಅನುಸೂಚಿ

(ಪ್ರಕರಣ (2) (ಬಿ) ಖಂಡ ಗಮನಿಸಿ)

| ಕ್ರಮ ಸಂಖ್ಯೆ | ತಾಲ್ಲೂಕಿನ ಮತ್ತು ಇತರೆ ಪ್ರದೇಶಗಳ ಹೆಸರುಗಳು |
|---|---|
| (1) | (2) |
| 1 | **ಆನೇಕಲ್** |
| 2 | ಹೊಸಕೋಟೆ |
| 3 | ಕನಕಪುರ |
| 4 | ಚಳ್ಳಕೆರೆ |
| 5 | ಹಿರಿಯೂರು |
| 6 | ಮೊಳಕಾಲ್ಮೂರು |
| 7 | ಬಾಗೇಪಲ್ಲಿ |
| 8 | ಬಂಗಾರುಪೇಟೆ |
| 9 | ಚಿಂತಾಮಣಿ |

| ಕ್ರಮ ಸಂಖ್ಯೆ | ತಾಲ್ಲೂಕಿನ ಮತ್ತು ಇತರೆ ಪ್ರದೇಶಗಳ ಹೆಸರುಗಳು |
|---|---|
| (1) | (2) |
| 10 | ಗೌರಿಬಿದನೂರು |
| 11 | ಗುಡಿಬಂಡೆ |
| 12 | ಮಾಲೂರು |
| 13 | ಮುಳಬಾಗಿಲು |
| 14 | ಶ್ರೀನಿವಾಸಪುರ |
| 15 | ಮಧುಗಿರಿ |
| 16 | ಪಾವಗಡ |
| 17 | ಸಿರಾ |
| 18 | ಬಂಟ್ವಾಳ |
| 19 | ಮಂಗಳೂರು |
| 20 | ಪುತ್ತೂರು |
| 21 | ಸುಳ್ಯ |
| 22 | ಮಡಿಕೇರಿ |
| 23 | ವಿರಾಜಪೇಟೆ |
| 24 | ಚಾಮರಾಜನಗರ |
| 25 | ಗುಂಡ್ಲುಪೇಟೆ |
| 26 | ಹೆಗ್ಗಡದೇವನಕೋಟೆ |
| 27 | ಕೊಳ್ಳೇಗಾಲ |
| 28 | ಬಿಜಾಪುರ |
| 29 | ಇಂಡಿ |
| 30 | ಬಳ್ಳಾರಿ |
| 31 | ಸಂಡೂರು |
| 32 | ಸಿರಿಗುಪ್ಪೆ |
| 33 | ಅಫಜಲ್ಪುರ |
| 34 | ಆಳಂದ |
| 35 | ಚಿಂಚೋಳಿ |
| 36 | ಸೇಡಂ |
| 37 | ಶಹಪುರ |
| 38 | ಯಾದಗೀರ್ |
| 39 | ಮಾನ್ವಿ |
| 40 | ರಾಯಚೂರು |
| 41 | ಅಥಣಿ |
| 42 | ಬೆಳಗಾವಿ |
| 43 | ಹುಕ್ಕೇರಿ |
| 44 | ಚಿಕ್ಕೋಡಿ |

| ಕ್ರಮ ಸಂಖ್ಯೆ | ತಾಲ್ಲೂಕಿನ ಮತ್ತು ಇತರೆ ಪ್ರದೇಶಗಳ ಹೆಸರುಗಳು |
|---|---|
| (1) | (2) |
| 45 | ಖಾನಾಪುರ |
| 46 | ಕಾರವಾರ |
| 47 | ಜೋಯಿಡಾ |
| 48 | ಔರಾದ್ |
| 49 | ಬಸವಕಲ್ಯಾಣ |
| 50 | ಭಾಲ್ಕಿ |
| 51 | ಬೀದರ್ |
| 52 | ಹುಮ್ನಾಬಾದ್ |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಈ ಮುಂದಿನವುಗಳಿಗಾಗಿ ಉಪಬಂಧವನ್ನು ಕಲ್ಪಿಸುವುದಕ್ಕಾಗಿ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರವನ್ನು ಸ್ಥಾಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

(ಎ) "ಗಡಿ ಪ್ರದೇಶ"ದ ವ್ಯಾಪ್ತಿಯಲ್ಲಿ ಗುರುತಿಸಿರುವ 52 ತಾಲ್ಲೂಕುಗಳಲ್ಲಿ ಕನ್ನಡ ಭಾಷೆ, ಸಂಸ್ಕೃತಿ, ಶಿಕ್ಷಣ, ನೀರಾವರಿ, ಪರಿಸರ, ಉದ್ದಿಮೆ, ಆರೋಗ್ಯ ಮತ್ತು ಕೃಷಿ ಇಂತಹ ಜನಜೀವನದ ಎಲ್ಲಾ ಕ್ಷೇತ್ರಗಳಲ್ಲೂ ಅಭಿವೃದ್ಧಿ ಹೊಂದುವುದು;

(ಬಿ) ಕನ್ನಡ ಜನರು, ನೆರೆಯ ರಾಜ್ಯದ ಭಾಷೆ ಸಂಸ್ಕೃತಿ ಪ್ರಭಾವಕ್ಕೆ ಸಿಲುಕಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಕನ್ನಡ ಪರಿಸರದಿಂದ ದೂರ ಸರಿಯದಂತೆ ಅವರನ್ನು ರಕ್ಷಿಸುವುದು;

(ಸಿ) ಕನ್ನಡ ಮಾಧ್ಯಮದ ಮೂಲಕ ಶಿಕ್ಷಣ ನೀಡುವುದಕ್ಕಾಗಿ, ಪಠ್ಯ ಪುಸ್ತಕಗಳನ್ನು, ಗ್ರಂಥಾಲಯ ಸೌಲಭ್ಯ ಒದಗಿಸುವುದಕ್ಕಾಗಿ, ಉಪನ್ಯಾಸ ಕಾರ್ಯಕ್ರಮ ಹಾಗೂ ಕನ್ನಡ ಭಾಷೆಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಕೈಗೊಳ್ಳುವುದಕ್ಕಾಗಿ ಯೋಜನೆಗಳನ್ನು ಅನುಷ್ಠಾನಗೊಳಿಸುವುದು;

(ಡಿ) ಕನ್ನಡಿಗರ ಪ್ರಯೋಜನೆಗಾಗಿ ಅಗತ್ಯವಾದ ಕರಕುಶಲ ಕೈಗಾರಿಕೆಗಳು, ಗುಡಿ ಕೈಗಾರಿಕೆಗಳು ಮತ್ತು ಇತರ ಸೌಲಭ್ಯಗಳನ್ನು ಪ್ರೋತ್ಸಾಹಿಸುವುದು;

(ಇ) ಗಡಿ ಪ್ರದೇಶದಲ್ಲಿನ ಜನರ ಸ್ಥಿತಿಯನ್ನು ಮತ್ತು ಗಡಿ ಪ್ರದೇಶದ ನೆರೆಹೊರೆಯಲ್ಲಿರುವ ಕನ್ನಡ ಮಾತನಾಡುವ ಜನರ ಸ್ಥಾನಮಾನಗಳನ್ನು ಸುಧಾರಿಸುವುದು;

(ಎಫ್) ಕನ್ನಡಿಗರ ಅಭದ್ರತೆ ಭಾವನೆಯನ್ನು ತೊಡೆದುಹಾಕಿ ಕನ್ನಡಿಗರಿಗೆ ಆತ್ಮಾಭಿಮಾನ ಉಂಟಾಗುವಂತೆ ಮಾಡುವುದು.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನ ರಚನಾ ಕ್ರಮದಿಂದಾಗಿ 711 ಲಕ್ಷ ರೂಪಾಯಿಗಳ ಆವರ್ತಕ ವೆಚ್ಚ ಮತ್ತು 289 ಲಕ್ಷ ರೂಪಾಯಿಗಳ ಅನಾವರ್ತಕ ವೆಚ್ಚ ಉಂಟಾಗುತ್ತದೆ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ**

**ಖಂಡ 4:** (4) ನೇ ಉಪ ಖಂಡವು, ಪ್ರಾಧಿಕಾರದ ಅಧ್ಯಕ್ಷರು ಮತ್ತು ಇತರ ಸದಸ್ಯರುಗಳಿಗೆ ಪಾವತಿಸಬೇಕಾದ ಭತ್ಯೆಗಳ ಬಗ್ಗೆ ನಿಯಮಗಳನ್ನು ರಚಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 8:**

(i) (1)ನೇ ಉಪ ಖಂಡವು, ಪ್ರಾಧಿಕಾರದ ಅಧಿಕಾರಿಗಳು ಮತ್ತು ನೌಕರರ ನೇಮಕಾತಿ ಅಥವಾ ನಿಯೋಜನೆಯ ವಿಧಾನಗಳ ಬಗ್ಗೆ ನಿಯಮಗಳನ್ನು ರಚಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(ii) (2)ನೇ ಉಪ ಖಂಡವು, ಪ್ರಾಧಿಕಾರದ ಅಧಿಕಾರಿಗಳ ಮತ್ತು ನೌಕರರ ನೇಮಕಾತಿಯ ವಿಧಾನ ಮತ್ತು ಅವರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 13:** (2)ನೇ ಉಪ ಖಂಡವು, ಪ್ರಾಧಿಕಾರಕ್ಕೆ ಸಲ್ಲಿಸಿದ ಸೇವೆಗಳು ಅಥವಾ ನೆರವಿಗಾಗಿ ತಜ್ಞರುಗಳಿಗೆ ಸಂದಾಯ ಮಾಡತಕ್ಕ ಗೌರವಧನ ಮತ್ತು ಭತ್ಯೆಗಳ ಮೊತ್ತದ ಬಗ್ಗೆ ನಿಯಮಗಳನ್ನು ರಚಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 23:**

(i) (1)ನೇ ಉಪ ಖಂಡವು, ಪ್ರಾಧಿಕಾರದ ಲೆಕ್ಕಪತ್ರಗಳನ್ನು ಇಡುವ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ

(ii) (2)ನೇ ಉಪ ಖಂಡವು ಪ್ರಾಧಿಕಾರದ ಲೆಕ್ಕಪತ್ರಗಳ ವಾರ್ಷಿಕ ವರದಿಯನ್ನು ತಯಾರಿಸುವ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(iii) (5)ನೇ ಉಪ ಖಂಡವು, ಪ್ರಾಧಿಕಾರವು ಸಂದಾಯ ಮಾಡಬೇಕಾದ ಲೆಕ್ಕ ಪರಿಶೋಧನಾ ವೆಚ್ಚಗಳ ಬಗ್ಗೆ ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(iv) (6)ನೇ ಉಪ ಖಂಡವು, ಪ್ರಾಧಿಕಾರದ ಲೆಕ್ಕಪತ್ರಗಳ ವಾರ್ಷಿಕ ವರದಿಯ ಪ್ರಕಟಣೆ ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸುವ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 26:** ಪೂರ್ವ ಪ್ರಕಟಣೆಯ ತರುವಾಯ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಬಿ. ಎಸ್. ಯಡಿಯೂರಪ್ಪ**
**ಮುಖ್ಯಮಂತ್ರಿ**

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**FIFTH SESSION**

## THE KARNATAKA BORDER AREA DEVELOPMENT AUTHORITY BILL, 2010

**(L.A. Bill No. 5 of 2010)**

A Bill to provide for establishment of the Karnataka Border Area Development Authority for the development of border areas of Karnataka and for monitering and evaluating the implementation of projects and programmes related to the development of the border areas of Karnataka.

Whereas, it is expedient to provide for the establishment of the Karnataka Border Area Development Authority for the development of border areas of Karnataka and for monitering and evaluating the implementation of projects and programmes relating to the development of the Border Areas of Karnataka;

Be it enacted by the Karnataka State Legislature in the sixty first year of the Republic of India as follows:-

**1. Short title and commencement.-** (1) This Act may be called the **Karnataka Border Area Development Authority Act, 2010.**.

(2) It shall come into force on such date as the State Government may, by notification, appoint.

**2. Definitions.-** In this Act, unless the context otherwise requires,-

(a) **"Authority"** means, the Karnataka Border Area Development Authority constituted under section 3;

(b) **"Border area"** means, the Taluks and other areas situated in the border areas of Karnataka enumerated in the Schedule;

(c) **"Chairman"** means, the Chairman of the Authority;

(d) **"Department"** means, all departments of the State Government, including any body or corporation established by the State Government by or under any law or any institution or body of organisations receiving financial aid from the State Government;

(e) **"Member"** means, a member of the Authority;

(f) **"Projects and programmes"** means, the annual projects and programmes in various departments prepared by the Authority for the development of the border areas of Karnataka;

(g) **"Secretary"** means, the Secretary of the Authority;

(h) **"Regulations"** means, the regulations made under this Act.

## CHAPTER II

**3. Constitution of the Authority.-** (1) As soon as may be, after the commencement of this Act there shall be established for the purposes of this Act, an Authority for development of the border areas of Karnataka to be called the Karnataka Border Area Development Authority with its head-quarters at Bangalore.

(2) The Authority shall be a body corporate by the name aforesaid having perpetual succession and a common seal to contract and shall by the said name sue and be sued.

(3) The Authority shall consist of the following members, namely:-

(a) A person who has worked for the development of border areas of Karnataka nominated by the State Government to be the Chairman of the Authority.

| | |
|---|---|
| (b) Seven persons nominated by the State Government having special knowledge or practical experience in the field of Literature, Administration, Education or Law who are aware of the problems of the border areas, | -- Members |
| (c) The Secretary to Government, Department of Kannada, Culture and Information | -- Ex-officio Member |
| (d) The Secretary to Government, Department of Parliamentary Affairs and Legislation | -- Ex-officio Member |
| (e) The Secretary to Government, Department of Rural Development and Panchayath Raj | -- Ex-officio Member |
| (f) The Principal Secretary to Government, Revenue Department | -- Ex-officio Member |
| (g) The Director, Directorate of Kannada and Culture | -- Ex-officio Member |
| (h) The President, Kannada Sahitya Parishath | -- Ex-officio Member |
| (i) The Chairman, Karnataka Sahitya Academy | -- Ex-officio Member |
| (j) The Chairman, Kannada Development Authority | -- Ex-officio Member |
| (k) The Secretary of the Authority | -- Member- Secretary |

**4. Term of office and conditions of service.-** (1) Subject to the pleasure of the State Government, the Chairman and other members nominated by the State Government shall hold office for a period of three years. This shall not apply in case of an ex-officio member.

(2) The Chairman or a member other than an ex-officio member may resign his office by writing under his hand addressed to the State Government but shall continue in office until his resignation is accepted.

(3) A casual vacancy in the office of a Chairman or a member shall be filled by the State Government by nominating another person as Chairman or member as the case may be and the person so nominated shall hold office for the unexpired portion of the term of the office of his predecessor.

(4) The Chairman and other members shall receive such allowances as may be prescribed.

(5) The allowances payable to the Chairman and other members shall be defrayed out of the Fund of the Authority.

(6) No act or proceedings of the Authority shall be invalid by reason only of the existence of any vacancy or defect in the constitution of the Authority.

**5. Disqualification for office of membership.-** (1) A person shall be disqualified for being appointed as and for being a member, if he,-

(a) has been convicted and sentenced to imprisonment for an offence which in the opinion of the State Government involves moral turpitude; or

(b) is of unsound mind and stands so declared by a competent court; or

(c) is an undischarged insolvent ; or

(d) has been removed or dismissed from service of the Central Government or a State Government or a body or corporation owned or controlled by the Central Government or a State Government; or

(e) has directly or indirectly by himself or his partner any share or interest in any work done by the order of the Authority or in any contract or employment with or under or by or on behalf of the Authority.

(f) is employed as a paid legal practitioner on behalf of the Authority or accepts employment of legal practitioner against the Authority;

(2) A person shall not be disqualified under clause (e) of sub-section (1) or be deemed to have any share or interest in any contract or employment within the meaning of the said clause by reason only of his having a share or interest in any newspaper in which any advertisements relating to the affairs of the Authority is inserted.

**6. Removal of member.-** (1) The State Government shall remove the Chairman or other member if,-

(a) he becomes subject to any of the disqualifications mentioned in section 5:

Provided that no Chairman or member shall be removed on the ground that he has become subject to the disqualification mentioned in clause (e) of sub-section (1) of that section, unless he has been given an opportunity of making his representation against the proposal ; or

(b) he refuses to act or becomes incapable of acting; or

(c) he without obtaining leave of absence from the Authority absents from three consecutive meetings of the Authority ; or

(d) in the opinion of the State Government he has so abused his position as to render his continuance in office detrimental to the public interest:

Provided that no member shall be removed under this clause unless he has been given an opportunity of making his representation against the proposal.

**7. Secretary.-** The State Government shall appoint an officer not below the rank of Group A officer to be the Secretary of the Authority. The Secretary shall receive such salary and other allowances as the State Government may determine from time to time.

(2) The State Government may grant from time to time leave of absence to the Secretary.

(3) The Secretary shall be the Chief Executive of the Authority and shall,-

(a) be responsible for implementing the projects and programmes approved by the Authority;

(b) operate the fund of the Authority;

(c) cause to be maintained accounts of the Authority;

(d) discharge such other functions which are conferred on him by or under this Act or any other law for the time being in force; and

(e) be responsible for presentation of records of the office during inspection of Chairman.

**8. Officers of the Authority and conditions of service.-** (1) Subject to such rules as may be prescribed, the State Government or such other officer as the State Government may authorise, may appoint or depute such officers and employees of the authority as it may deem necessary for the efficient discharge of its functions.

(2) The recruitment and terms and conditions of service of the officers and servants specified above shall be such as may be prescribed.

**9. Meetings of the Authority.-** (1) The meetings of the Authority shall be convened by the Chairman or by the Secretary with the prior approval of the Chairman and shall be held at any place within the jurisdiction of the Authority.

(2) The Authority shall meet at least once in every two months.

(3) The Chairman or the Secretary with the prior approval of the Chairman shall convene a special meeting if the Chairman feels it necessary.

(4) The Authority shall observe such rules of procedure in regard to the transaction of business at its meeting as may be provided by regulations.

(5) Every meeting shall be presided over by the Chairman and if for any reason, the Chairman is unable to attend any meeting any other member chosen by the members present at the meeting shall preside at the meeting.

(6) Nine members shall form the quorum.

**10. Proceedings presumed to be good and valid.-** No disqualification of or defect in the appointment of any person acting as Chairman or member shall be deemed to vitiate any act or proceeding of the Authority if such act or proceeding is otherwise in accordance with the provisions of this Act.

**11. Sub-Committee.-**The Authority may for any specific purpose constitute a Sub-Committee consisting of such members not exceeding six members from amongst its members, the Chairman of the Authority shall also be the Chairman of the Sub-Committee.

**12. Powers and duties of Sub-Committee.-** (1) The Sub-Committee shall exercise such of the powers and perform such duties of the Authority which are delegated to it by the Authority.

(2) The Sub-Committee shall meet at least once in a month.

(3) The Sub-Committee shall take decisions on urgent matters to review the prompt implementation of the decision of the Authority and suggest on urgent matter for action by the State Government.

(4) The Sub-Committee shall observe such rules of procedure in regard to the transaction of business at its meetings as may be provided by regulations.

**13. Obtaining the services of experts.-** (1) In order to carry out the purposes of the Act, the Authority if necessary, may obtain the services or assistance of the experts in such manner as it may deems fit.

(2) Honorarium and allowances payable to such experts for the services or assistance so rendered shall be of such an amount as may be prescribed;

**CHAPTER III**

**14. Preparation of project and programmes.-** The Authority shall every year prepare projects and programmes for the development of border areas and forward it to the State Government for approval. The State Government may approve the project and programmes with or without modification.

**15. Functions of the Authority.-** The Authority shall,-

(1) implement, supervise and evaluate the development works in the border areas and also improve the educational, social and cultural conditions of Kannada speaking people in the border areas of the neighbouring States.

(2) provide assistance for opening required number of Kannada medium schools in the areas outside the border of the State. Open Kannada medium schools to impart education in Kannada medium in those villages wherein Kannada schools have been closed by the neighbouring states and construct school buildings.

(3) assist in the appointment of required number of teachers in the border areas to teach in Kannada medium. Provide Kannada medium text books from time to time to the students studying in Kannada medium.

(4) open libraries in the border area to provide them access to Kannada daily, monthlies and weeklies to facilitate Kannadigas of those areas to learn about the day today developments in Kannada Language.

(5) grant annual aid to registered Kannada organisations for conducting pro-Kannada activities to facilitate development of Kannada language.

(6) arrange extension lecture programmes in order to motivate pro-Kannada organisations to work actively towards the development of Kannada as well as to form many Kannada Associations in the border area. Help them to organise series of extension lectures about Kannada Language.

(7) fulfill the cultural requirements of Kannadigas in the border area by organising cultural activities at border areas.

(8) provide suitable forum to exhibit art forms such as Kannada literature cinema, drama, folk, dance, Yakshagana, lavani, bayalata togalu bombeyata, harikathe, music etc. Construct cultural auditoria for the exhibition of these art forms in the taluk headquarters, villages and for Kannadigas of other States.

(9) conduct Gadinadu and Horanadu festivals. Construct Kannada Bhavanas. Conduct several development programmes to improve the living conditions of the people in the border areas and to fufill their cultural, social, financial, educational aspirations.

(10) conduct study regarding the facilities to be provided to the Scheduled Caste and Scheduled Tribes of the border area for security of their life and help them through the concerned departments.

(11) take steps to promote handicrafts, cottage industries and other village industries in the border area.

(12) supervise the facilities required for drinking water, health, agriculture, irrigation, road and for other development works to the villages in the border area to be provided through the concerned departments.

**16. Implementation of the objectives of the Act.-** The Athority shall implement the objectives of the Act through the Deputy Commissioner at District level, the Assistant Commissioner at the Sub-divisional level and the Tahsildar at the Taluk level.

**17. Obtaining information.-** The Authority may for the purpose of this Act seek and obtain information relating to implementation of the Border Area Development of Karnataka from any officer of the State Government and such officer shall be bound to furnish the information sought by the Authority.

**18. Advise by the Authority.-** The Authority, in order to carryout the purposes of this Act, shall advise the State Government regarding implementation of its projects and programmes.

**19. Power to record dereliction of duty and to inform the appointing authority.-** The Authority in order to carryout the purposes of the Act, shall record, any violation by the officers and officials of the State Government and local bodies of any order, issued by the Government from time to time or of any order, which is already in force as dereliction of duty and shall advise to the appointing authority for necessary action.

**CHAPTER IV**

**20. Fund of the Authority.-** (1) There shall be a fund called the Border area development Authority Fund.

(2) The following shall form part of, or be paid into the Border area development Authority Fund, namely:-

(i) all grants, subversions, donations and gifts made by the Central Government, State Government, any local authority, any body whether in-corporated or not or any persons; and

(ii) all other sums received by or on behalf of the Authority from any source whatsoever.

(3) Except as otherwise directed by the State Government all money credited to the Fund shall be invested in any Scheduled bank.

(4) The administrative expenses to the Authority including the salaries, allowances and pensions payable to the Secretary and other officers and employees of the Authority shall be defrayed out of the Fund of the Authority.

**21. Allocation for project and programme.-** The State Government may keeping in view the project and programmes of the Authority, make financial allocations to the Authority in the annual Budget of the State.

**22. Grant by State Government.-** The State Government may every year make a grant to the Authority of a sum equivalent to the administrative expenses of the Authority.

**23. Accounts and audit.-** (1) Accounts of the income and expenditure of the Authority Fund shall be kept in accordance with such rules as may be prescribed.

(2) The Authority shall prepare an annual statement of accounts in such form as may be prescribed.

(3) The accounts of the Authority shall be audited annually by such auditor as the State Government may appoint.

(4) The auditor shall for the purposes of the audit, have access to all the accounts and other records of the Authority.

(5) The Authority shall pay from its fund such charges for the audit as may be prescribed.

(6) As soon as may be after the receipt of the report of the auditor, the Authority shall send a copy of the annual statement of accounts, together with a copy of the report of the auditor to the State Government and shall cause to be published the annual statement of accounts in such manner as may be prescribed.

(7) The State Government may after perusal of the report of the auditor give such directions as it thinks fit to the Authority and the Authority shall comply with such directions.

**CHAPTER V**

**MISCELLANEOUS**

**24. Report.-** The Authority shall before such dates, in such form and at such interval as may be prescribed submit the prescribed report to the State Government.

**25. Budget of the Authority.-** The Authority shall prepare every year before such date and in such form as may be prescribed a budget estimate of its income and expenditure for the financial year to commence on the first day of April next following and shall forward it to the State Government.

**26. Power to make rules.-** (1) The State Government may, after previous publication by notification make rules to carryout the purposes of this Act.

(2) Every rule made under this Act shall be laid as soon as may be after it is made before each House of the State Legislature while it is in session for a total period of thirty days, which may be comprised in one session or in two or more successive sessions and if, before the expiry of the session in which it is so laid or the session immediately following both Houses agree in making any modification in the rule or decide that any rule should not be made, the rule shall thereafter have effect only in such modified form or be of no effect, as the case may be, so, however, that any such modification or annulment shall be without prejudice to the validity of anything previously done under that rule.

**27. Power of Authority to make regulations.-** The Authority may subject to the provisions of this Act and the rules made under section 26 and with the previous sanction of the State Government, by notification, make regulations to carry-out the purposes of this Act.

**SCHEDULE**

[See clause (b) of section 2]

| Sl.No. | Name of Taluks and other areas |
|---|---|
| (1) | (2) |
| 1 | Anekal |
| 2 | Hoskote |
| 3 | Kanakapur |
| 4 | Challakere |
| 5 | Hiriyur |
| 6 | Molakalmur |
| 7 | Bagepalli |
| 8 | Bangarpet |
| 9 | Chintamani |
| 10 | Gowribidanur |
| 11 | Gudibande |
| 12 | Malur |
| 13 | Mulbagil |
| 14 | Srinivasapur |
| 15 | Madhugiri |
| 16 | Pavagada |
| 17 | Sira |
| 18 | Bantwal |
| 19 | Mangalore |
| 20 | Puttur |
| 21 | Sullia |
| 22 | Madikeri |
| 23 | Virajpet |
| 24 | Chamarajnagar |
| 25 | Gundlupet |
| 26 | Heggadadevanakote |
| 27 | Kollegal |
| 28 | Bijapur |
| 29 | Indi |
| 30 | Bellary |

| Sl.No. | Name of Taluks and other areas |
|---|---|
| (1) | (2) |
| 31 | Sandur |
| 32 | Siriguppe |
| 33 | Afsalpur |
| 34 | Aland |
| 35 | Chincholi |
| 36 | Sedam |
| 37 | Shahapur |
| 38 | Yadgir |
| 39 | Manvi |
| 40 | Raichur |
| 41 | Athani |
| 42 | Belgaum |
| 43 | Hukkeri |
| 44 | Chikkodi |
| 45 | Khanapur |
| 46 | Karwar |
| 47 | Joida |
| 48 | Aurad |
| 49 | Basavakalyan |
| 50 | Bhalki |
| 51 | Bidar |
| 52 | Humnabad |

## STATEMENT OF OBJECTS AND REASONS

It is considered necessary to provide for establishment of the Karnataka Border Area Development Authority to,-

(a) develop people in 52 border taluks which have been identified and covered under the "border area" in all spheres of life, like Kannada language, culture, education, irrigation, environment, industry, health and agriculture;

(b) protect the Kannada people from the influence of the neighbouring state language, culture, so that they should not be carried away from the Kannada environment socially, culturally, educationally and financially;

(c) implement schemes to provide education in Kannada medium, text books, library and conducting lecture programme and also cultural programmes in Kannada language;

(d) encourage handicraft industries, cottage industries and other facilities required for the benefit of kannadigas;

(e) improve living conditions of the people in the border area and also the status of the Kannada speaking people in the neighbouring border areas; and

(f) remove the insecurity feelings of the Kannadigas so that they get self respect.

Hence the Bill.

## FINANCIAL MEMORANDUM

There will be a recurring expenditure of Rs. 711 Lakhs and non-recurring expenditure of Rs. 289 Lakhs by the proposed legislative measure.

## MEMORANDUM REGARDING DELEGATED LEGISLATION

**Clause 4:** Sub-clause (4) empowers the State Government to make rules regarding the allowances payable to the Chairman and other members of the authority.

**Clause 8:** (i) Sub-clause (1) empowers the State Government to make rules regarding manner of appointment or deputation of officers and employees of the authority.

(ii) Sub-clause (2) empowers the State Government to prescribe by rules the manner of recruitment and terms and conditions of service of the officers and servants of the Authority.

**Clause 13:** Sub-clause (2) empowers the State Government to make rules regarding an amount of Honorarium and allowances payable to experts for the services or assistance rendered to the Authority.

**Clause 23:** (i) Sub-clause (1) empowers the State Government to prescribe by rules the manner of keeping of Accounts of the Authority.

(ii) Sub-clause (2) empowers the State Government to make rules regarding the manner of preparation of annual statement of accounts of the Authority.

(iii) Sub-clause (5) empowers the State Government to prescribe by rules regarding Audit charges payable by the Authority.

(iv) Sub-clause (6) empowers the State Government to prescribe by rules the manner of publication of annual Statement of accounts of the authority and submission to the State Government.

**Clause 26:** Empowers the State Government make rules to carry out the purposes of the Act after previous publication.

The above delegation of Legislative power is normal in character.

**B.S.YEDIYURAPPA**
Chief Minister

**S.B. PATIL**
Secretary, Karnataka Legislative Assembly

**S.B. PATIL**
Secretary
Karnataka Legislative Assembly

## ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಮಾರ್ಚ್ ೧೦, ೨೦೧೦ (ಫಾಲ್ಗುಣ ೧೯, ಶಕ ವರ್ಷ ೧೯೩೧) | ನಂ. ೨೪೧ |
|---|---|---|

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಸಿಐ 11 ಎಸ್‌ಪಿಕ್ಯೂ 2010, ಬೆಂಗಳೂರು, ದಿನಾಂಕ: 10ನೇ ಮಾರ್ಚ್, 2010**

ಅಧಿಸೂಚನೆ ಸಂಖ್ಯೆ: ಸಿಐ 11 ಎಸ್‌ಪಿಕ್ಯೂ 2010, ದಿನಾಂಕ: 3.2.2010 ರಲ್ಲಿ ಗ್ರಾಮದ ಹೆಸರು ಹೆಬ್ಬಾಳ ಎಂಬುದರ ಬದಲಾಗಿ ಹೆಬ್ಬಾಳ ಅಮಾನಿಕೆರೆ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಮಾರ್ಚ್ ೧೦, ೨೦೧೦ (ಫಾಲ್ಗುಣ ೧೯, ಶಕ ವರ್ಷ ೧೯೩೧) | ನಂ. ೨೪೨ |
|---|---|---|

**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

**ನಂ. 8, 1ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು – 560052**

**ತಿದ್ದುಪಡಿ ಅಧಿಸೂಚನೆ**

